# ಮಾಸ್ತಿಯವರ ಕಥೆಗಳಲ್ಲಿ "ಸ್ತ್ರೀ" ಪಾತ್ರಗಳ ಅನಾವರಣ

ಮಾಸ್ಟರ್ ಆಫ್ ಫಿಲಾಸಫಿ(ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕ

**ಬಾಬುರೆಡ್ಡಿ ಸಿ.**

ಮಾರ್ಗದರ್ಶಕರು

**ಡಾ|| ಜೆ.ಕೆ. ರಮೇಶ್**

ಎಂ.ಎ, ಪಿ.ಹೆಚ್.ಡಿ.





**ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,**

**ಕನ್ನಡ ವಿಶ್ವವಿದ್ಯಾಲಯ, ಹಂಪಿ,**

**ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.**

**2007**



165

# ಮಾಸ್ತಿಯವರ ಕಥೆಗಳಲ್ಲಿ "ಸ್ತ್ರೀ" ಪಾತ್ರಗಳ ಅನಾವರಣ

ಮಾಸ್ಟರ್ ಆಫ್ ಫಿಲಾಸಫಿ(ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕ

**ಬಾಬುರೆಡ್ಡಿ ಸಿ.**



'ಸಿರಿಗನ್ನಡ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.



ಮಾರ್ಗದರ್ಶಕರು

**ಡಾ॥ ಜೆ.ಕೆ. ರಮೇಶ್**

ಎಂ.ಎ, ಪಿ.ಹೆಚ್.ಡಿ.






ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.


**2007**



# ದೃಢೀಕರಣ ಪತ್ರ

ಬಾಬುರೆಡ್ಡಿ. ಸಿ. ಅವರು "ಮಾಸ್ತಿಯವರ ಕಥೆಗಳಲ್ಲಿ 'ಸ್ತ್ರೀ' ಪಾತ್ರಗಳ ಅನಾವರಣ" ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ: 20-2-02

ಸ್ಥಳ : ವಿದ್ಯಾರಣ್ಯ

(ಡಾ॥ ಜೆ.ಕೆ. ರಮೇಶ್)
ಪ್ರಾಧ್ಯಾಪಕರು,
ಕನ್ನಡ ವಿಭಾಗ,
ತುಂಗಾ ಕಾಲೇಜು,
ತೀರ್ಥಹಳ್ಳಿ.

# ಪ್ರಮಾಣ ಪತ್ರ

"ಮಾಸ್ತಿಯವರ ಕಥೆಗಳಲ್ಲಿ 'ಸ್ತ್ರೀ' ಪಾತ್ರಗಳ ಅನಾವರಣ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ॥ ಜೆ.ಕೆ. ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 30-07-2007

Baburaddy C

(ಬಾಬುರೆಡ್ಡಿ. ಸಿ)

ಎಂ.ಫಿಲ್ ವಿದ್ಯಾರ್ಥಿ,

ಚನ್ನಿಗರಾಯಪುರ ಗ್ರಾಮ,

# ಮಾಸ್ತಿಯವರ ಕಥೆಗಳಲ್ಲಿ 'ಸ್ತ್ರೀ' ಪಾತ್ರಗಳ ಅನಾವರಣ

## ಪರಿವಿಡಿ

'ಹಂಪಿ ಕನ್ನಡ' ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಸ್ತಾವನೆ

ಕತೆ ಹೇಳುವ ಕತೆ ಕೇಳುವ ಸಂಪ್ರದಾಯ ಭಾರತೀಯ ಸಂಸ್ಕೃತಿಗೆ ಹೊಸತೇನಲ್ಲ. ಅಭಿಜಾತ ಮತ್ತು ಜಾನಪದ ಎರಡೂ ಪರಂಪರೆಗಳಲ್ಲಿ ಕಥನಕ್ಕೆ ವಿಶೇಷ ಪ್ರಾಮುಖ್ಯವಿದೆ. ಒಂದಲ್ಲ ಒಂದು ರೀತಿಯಲ್ಲಿ ಕತೆ ಹೇಳುವ ಸಂಪ್ರದಾಯ ಮತ್ತು ಈ ಕತೆಯನ್ನು ಕೇಳುವ ಅಭ್ಯಾಸ ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬಿಟ್ಟಿದೆ. ಹೀಗಾಗಿ ಕತೆ ಪುರಾಣದ್ದಾಗಿರಲಿ, ಇತಿಹಾಸದ್ದಾಗಿರಲಿ, ಸಮಕಾಲೀನವಾಗಿರಲಿ ಇಲ್ಲವೆ ಪೂರ್ಣ ಕಾಲ್ಪನಿಕವಾಗಿರಲಿ ಅದು ಒಟ್ಟಿನಲ್ಲಿ ನಿರೂಪಕ ಮತ್ತು ಕೇಳುಗನ ನಡುವಣ ಕೊಂಡಿಯಾಗಿರುತ್ತದೆ.

ಸಣ್ಣಕತೆ ಎಂಬ ಪರಿಭಾಷೆ ಕನ್ನಡದಲ್ಲಿ ಹುಟ್ಟಿಕೊಂಡದ್ದು ಇಂಗ್ಲೀಷ್ ಸಾಹಿತ್ಯ ವಿಮರ್ಶೆಯ ಪರಿಚಯದಿಂದ. ಆದರೆ ಅದಕ್ಕೂ ಮೊದಲು ಸಣ್ಣಕಥಾ ಸ್ವರೂಪದ ಲಕ್ಷಣಗಳನ್ನು ಅನಾದಿ ಕಾಲದಿಂದಲೂ ಕಾಣಬಹುದಾಗಿದೆ. 'ಎಡ್ಗರ್ ಅಲೆನ್ ಪೊ' ಸಣ್ಣಕತೆಯ ಸ್ವರೂಪವನ್ನು ವಿವರಿಸಲು ಪ್ರಯತ್ನಿಸಿದ. ಅವನ ಪ್ರಕಾರ ಸಣ್ಣಕತೆ "ಓದಲು ಅರ್ಧಗಂಟೆ ಒಂದು ಅಥವಾ ಎರಡು ಗಂಟೆಗಳ ಕಾಲ ತೆಗೆದುಕೊಳ್ಳುವ ಸಂಕ್ಷಿಪ್ತವಾದ ಗದ್ಯ ನಿರೂಪಣೆ" ಸಣ್ಣಕತೆಯ ವ್ಯಾಪ್ತಿಯನ್ನು ಈ ರೀತಿ ಗಮನಿಸವುದಾದರೆ ಈ ಬಗೆಯ ರಚನೆಗಳು ಬರವಣಿಗೆಯ ಕಲೆ ಮನುಷ್ಯನಿಗೆ ಪರಿಚಯವಾಗುವುದಕ್ಕಿಂತ ಸಾವಿರಾರು ವರ್ಷಗಳಷ್ಟು ಹಿಂದಿನಿಂದಲೇ ಆಸ್ತಿತ್ವದಲ್ಲಿದ್ದವೆಂದು ಹೇಳಬೇಕಾಗುತ್ತದೆ. ನಮಗೆ ದೊರೆತಿರುವ ಅತಿ ಪ್ರಾಚೀನ ಸಣ್ಣಕತೆ, ಬಹುಶಃ ಕ್ರಿ.ಪೂ. 3200 ರ ಸುಮಾರಿನದು ಈಜಿಪ್ಟ್ ಭಾಷೆಯ "ದಿ ಟೂ ಬ್ರದರ್ಸ್" ಎಂಬುದು.

ಕನ್ನಡದಲ್ಲಿ ಸಮೃದ್ಧಿಯಾಗಿ ಸಣ್ಣಕತೆಗಳು ಸೃಷ್ಟಿಯಾಗತೊಡಗಿದ್ದು ನವೋದಯ ಕಾಲದಲ್ಲಿ. ಪಂಜೆ ಮಂಗೇಶರಾಯರ "ನನ್ನ ಚಿಕ್ಕತಾಯಿ" "ನನ್ನ ಚಿಕ್ಕ ತಂದೆ" ಎನ್ನುವ ಕತೆಗಳನ್ನು ಕನ್ನಡದ ಮೊದಲ ಕತೆಗಳು ಎಂದು ಗುರುತಿಸಿದರೂ, ಪ್ರಮುಖವಾಗಿ ಕಥಾ ಸಾಹಿತ್ಯಕ್ಕೆ ಒಂದು ರೀತಿಯ ಗಾಂಭೀರ್ಯವನ್ನಾಗಲೀ, ಪ್ರೌಢಿಮೆಯನ್ನಾಗಲೀ ದೊರಕಿಸಿಕೊಟ್ಟವರೆಂದರೆ ಮಾಸ್ತಿಯವರು.

'ಮಾಸ್ತಿ ಕನ್ನಡದ ಆಸ್ತಿ' ಎಂಬ ಮಾತು ಅವರ ಜೀವನ ಮತ್ತು ಬರವಣಿಗೆಗಳನ್ನು ಕಂಡವರಿಗೆ ಉತ್ಪ್ರೇಕ್ಷೆ ಅಲ್ಲ, ಮಾಸ್ತಿಯವರ ಸಮಕಾಲೀನ ಸಾಹಿತಿಗಳೂ ಸಹ ಕತೆಗಳನ್ನು ಬರೆದವರಾದರೂ, ತಮ್ಮ ಕೈಯನ್ನು ಬರವಣಿಗೆಯಲ್ಲಿ ಬಳಸಿಕೊಳ್ಳಲು ಮಾತ್ರವೇ ಸಣ್ಣಕತೆಗಳ ನಿರ್ಮಾಣ ಮಾಡಿದರು. ಒಂದು ನಿರ್ದಿಷ್ಟ ಯಶಸ್ಸು ಲಭಿಸಿದ ಮೇಲೆ ಅವರೆಲ್ಲಾ ಸಣ್ಣಕತೆಗಳನ್ನು ಬರೆಯಲು ಹೋಗಲಿಲ್ಲ. ಅದಕ್ಕೆ ಬದಲಾಗಿ ಕಾವ್ಯ, ಕಾದಂಬರಿ, ನಾಟಕ ಹೀಗೆ ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲಿ ಕೈಯಾಡಿಸಿದರು. ಗಂಭೀರವಾಗಿ ಕಥಾಸಾಹಿತ್ಯವನ್ನು ಯಾರೂ ಮುಂದುವರೆಸದಿದ್ದಂತಹ ಸಂದರ್ಭದಲ್ಲಿ, ಮಾಸ್ತಿಯವರು ಕಥಾ ಸಾಹಿತ್ಯ ಪರಂಪರೆಗೆ ಒಂದು ಗಂಭೀರವಾದ ಒತ್ತು ಕೊಟ್ಟು ಇನ್ನುಳಿದ ಸಾಹಿತ್ಯ ಪ್ರಕಾರಗಳಂತೆ ಇದೂ ಸಹೃದಯರನ್ನು ಆಕರ್ಷಿಸುವ ನೇರ ಪ್ರಕಾರ ಎಂಬುದನ್ನು ತಮ್ಮ ಕತೆಗಳ

ಮಾಸ್ತಿಯವರು ತಮ್ಮ ಸೂಕ್ಷ್ಮಕಣ್ಣಿನಿಂದ ಈ ಅಪಾರ, ಅನಂತ ಜೀವನವನ್ನೂ ಕಂಡು, ನೋಡಿ, ಗುರುತಿಸಿ, ಅನುಭವಿಸಿ, ಮಿಡಿದು, ಸೃಷ್ಟಿಸಿದ್ದಾರೆ. ಅವರು ಪ್ರತಿ ಭಾವನೆಯನ್ನೂ ಮುಗ್ಧತೆಯಿಂದ ಹಿಡಿದು ನಿರ್ಲಿಪ್ತತೆಯವರೆಗೆ ಸ್ವಾರ್ಥದ ಬಲೆಯ ಸೆರೆತನದಿಂದ ನಿಸ್ವಾರ್ಥ ಸೇವೆಯ ಪರಾಕಾಷ್ಠತೆಯವರೆಗೆ ಮನಸ್ಸು ಮುಟ್ಟಬಹುದಾದ ಎಲ್ಲ ಸ್ಥಿತಿಗಳನ್ನೂ – ಸ್ಪಷ್ಟವಾಗಿ, ಪರಿಣಾಮಕಾರಿಯಾಗಿ ಚಿತ್ರಿಸಬಲ್ಲರು ಎನ್ನುವುದಕ್ಕೆ ಅವರ ಯಶಸ್ವಿಯಾದ ಸಣ್ಣ ಕಥೆಗಳೇ ಸಾಕ್ಷಿ.

ಸಣ್ಣ ಕಥಾ ಪ್ರಪಂಚಕ್ಕೆ ಹಲವರು ಅವರದೇ ಆದ ಕೊಡುಗೆಯನ್ನು ಕೊಟ್ಟಿದ್ದರೂ, ವಿಶೇಷವಾಗಿ ಮಾಸ್ತಿಯವರನ್ನು ಗುರುತಿಸುತ್ತೇವೆ. ಈ ನಿಟ್ಟಿನಲ್ಲಿ ಮಾಸ್ತಿಯವರ ಒಟ್ಟಾರೆ ಕಥೆಗಳನ್ನು ಹಲವು ಭಾಗಗಳನ್ನಾಗಿ ವಿಂಗಡಿಸಿಕೊಂಡು ಮೊದಲಿನಿಂದಲೂ ವಿಮರ್ಶಿಸುತ್ತಾ ಸಾಗಿದ್ದಾರೆ. ಮತ್ತೆ ಕೆಲವರು ಬಿಡಿಕತೆಗಳನ್ನೇ ತೆಗೆದುಕೊಂಡು ವಿಮರ್ಶೆ ಮಾಡಿದಂತಹವರು ಇದ್ದಾರೆ. ಎರಡು ಸಂಪುಟಗಳಲ್ಲಿ ಬಂದಿರುವ ಮಾಸ್ತಿಯವರ ಕತೆಗಳನ್ನಾಧರಿಸಿ 'ಕೆಲವು ಸಣ್ಣ ಕತೆಗಳು', 'ಕೆಳವರ್ಗದವರ ಜೀವನವನ್ನುಕುರಿತ ಕಥೆಗಳು', 'ಭಾರತದ ವಿಷಯದಲ್ಲಿ ಆಂಗ್ಲರ ದೃಷ್ಟಿಯನ್ನು ಕುರಿತ ಕಥೆಗಳು', ಹೀಗೆ ಹಲವು ರೀತಿಗಳಲ್ಲಿ ಮಾಸ್ತಿಯವರ ಕತೆಗಳನ್ನು ನೋಡಿದವರುಂಟು.

ಪ್ರಸ್ತುತದಲ್ಲಿ ನಾನು ಮಾಸ್ತಿಯವರ ಕತೆಗಳನ್ನೇ ಪ್ರಬಂಧ ಮಂಡನೆಯ ವಿಷಯವನ್ನಾಗಿ ತೆಗೆದುಕೊಂಡಿದ್ದೇನೆ. ಇದುವರೆಗೂ ಮಾಸ್ತಿ ಕತೆಗಳ ಬಗ್ಗೆ ಹಲವರು ತಮ್ಮ ಕೈಯಾಡಿಸಿದ್ದರೂ ಸಹ, ಹೊಸದೊಂದನ್ನು ಹುಡುಕುವ ಸಲುವಾಗಿ ಈ ವಿಷಯವನ್ನು ಆರಿಸಿಕೊಂಡಿದ್ದೇನೆ. ಮಾಸ್ತಿ ಕತೆಗಳನ್ನು ಸೂಕ್ಷ್ಮವಾಗಿ ಗಮನಿಸುವ ಎಲ್ಲರಿಗೂ ಹಲವು ವಿಷಯಗಳು ಒಟ್ಟೊಟ್ಟಿಗೆ ಗ್ರಹಿಕೆಯಾಗುವುದುಂಟು. ಆದ್ದರಿಂದಲೇ ಅವರ ಕತೆಗಳನ್ನು ಕುರಿತಂತೆ ದಿನೇ ದಿನೇ ಹಲವಾರು ಲೇಖನಗಳು ಸೃಷ್ಟಿಯಾಗುತ್ತಿವೆ. ಏನೇ ಆದರೂ ನನ್ನ ಮಟ್ಟಿಗೆ ಹೇಳುವುದಾದರೆ ಮಾಸ್ತಿ ಕತೆಗಳಲ್ಲಿ 'ಹೆಣ್ಣು' ಅನೇಕ ಕಡೆ ಪ್ರಧಾನ ವಸ್ತುವಾಗಿ ನಿಂತಿರುವುದನ್ನು ಗಮನಿಸಬಹುದು.

ಮಾಸ್ತಿಯವರ ಅನೇಕ ಕತೆಗಳಲ್ಲಿ ಹೆಣ್ಣಿನ ಕಷ್ಟ, ಸಹಿಷ್ಣುತೆ, ಸೈರಣೆ, ತಾಳ್ಮೆಗಳನ್ನು ನೋಡಬಹುದು. ಹೆಣ್ಣಿನ ಅಸಹಾಯಕತೆ, ಬವಣೆ, ದುಃಖ – ದುಮ್ಮಾನಗಳಿಗೆ ಮಾಸ್ತಿಯವರ ಹೃದಯ ಯಾವತ್ತೂ ಸ್ಪಂದಿಸಿದೆ. ವಿವಿಧ ಮನೋಧರ್ಮದ ನೂರಾರು ಹೆಣ್ಣು ಪಾತ್ರಗಳನ್ನು ಮಾಸ್ತಿ ತಮ್ಮ ಕತೆಗಳಲ್ಲಿ ವಿಶೇಷವಾಗಿ ಚಿತ್ರಿಸಿದ್ದಾರೆ. ಹೀಗಾಗಿ ಹೆಣ್ಣಿನ ಚಿತ್ರ ಮಾಸ್ತಿಯವರ ಕಥಾ ಸಾಹಿತ್ಯದಲ್ಲಿ ಯಾವತ್ತೂ ಏಕಮುಖವಾಗಿಲ್ಲ. ಎಲ್ಲ ಬಗೆಯ ಸರಳೀಕರಣ, ಆದರ್ಶೀಕರಣಗಳನ್ನು ಬದಿಗೊತ್ತಿ ಮಾಸ್ತಿ ಸ್ತ್ರೀಯನ್ನು ಜೀವಂತ ಪಾತ್ರಗಳಾಗಿ ಚಿತ್ರಿಸಿದ್ದಾರೆ. ಹೀಗಾಗಿ ಹೆಣ್ಣು ಮಾಸ್ತಿ ಕತೆಗಳಲ್ಲಿ ಸಂಕೇತ, ಪ್ರತಿಮೆಗಳಲ್ಲಿ ಕಳೆದು ಹೋಗದೆ ರಕ್ತಮಾಂಸಗಳಿಂದ ತುಂಬಿದ ಮನುಷ್ಯರಂತೆ ಕಾಣುತ್ತಾರೆ. ಇವರಲ್ಲಿ ಮುಗ್ಧರು, ಪ್ರಬುದ್ಧರು, ಒಳ್ಳೆಯವರು, ಒಳ್ಳೆಯವರಲ್ಲದವರು, ಎಲ್ಲರೂ ಸೇರುತ್ತಾರೆ. ವಿವಿಧ ಮನುಷ್ಯ ಸಂದರ್ಭಗಳಲ್ಲಿ ಇವರ ಅಂತರಂಗದ ನೂರು ಭಾವನೆಗಳು ನೂರು ರೀತಿಯಲ್ಲಿ ಚೆಲ್ಲಿಕೊಳ್ಳುತ್ತವೆ. ಅದಕ್ಕೆ

ಉದಾಹರಣೆಯೆಂಬಂತೆ "ಮೇಲೂರಿನ ಲಕ್ಷಮ್ಮ", "ನಿಜಗಲ್ಲಿನ ರಾಣಿ", "ಮೊಸರಿನ ಮಂಗಮ್ಮ", ಚೆನ್ನಮ್ಮ", "ಚಿಕ್ಕವ್ವ". "ದುರದೃಷ್ಟದ ಹೆಣ್ಣು" ಮೊದಲಾದ ಅನೇಕ ಕತೆಗಳನ್ನು ನೋಡಬಹುದು. ಹೆಣ್ಣು ಇವರ ಎಲ್ಲ ಕತೆಗಳಲ್ಲೂ ಒಂದೇ ರೀತಿಯಲ್ಲಿ ಚಿತ್ರಿತವಾಗುವುದಿಲ್ಲ. ಹೆಣ್ಣು ಕೇವಲ ಕಣ್ಣೀರು ಸುರಿಸುವ ಅಸಹಾಯಕಳಲ್ಲ; ಕೆಲವು ಕತೆಗಳಲ್ಲಿ ಆಕೆ ಗಂಡಸಿನಂತೆ ಎಲ್ಲ ಜವಾಬ್ದಾರಿಯನ್ನು ಹೊತ್ತು, ಎಲ್ಲವನ್ನೂ ಎದುರಿಸಿ ನಿಲ್ಲಬಲ್ಲ ಕೆಚ್ಚೆದೆಯವಳೂ ಹೌದು; ಮತ್ತೆ ಕೆಲವು ಕತೆಗಳಲ್ಲಿ ತನ್ನ ಗಂಡನನ್ನು ತಿರಸ್ಕರಿಸುವವಳೂ ಹೌದು. ಈ ಎಲ್ಲಾ ಬಗೆಯ ನಿಲುವುಗಳನ್ನು ತಾಳಬಲ್ಲ "ಸ್ತ್ರೀ ಪಾತ್ರಗಳ"ನ್ನು ಕುರಿತಂತೆ ನನ್ನ ಪ್ರಬಂಧ ಮಂಡನೆಯಲ್ಲಿ ಅನಾವರಣಗೊಳಿಸಲು ಪ್ರಯತ್ನಿಸಲಿದ್ದೇನೆ.

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿ ಬಹು ಹಿಂದಿನಿಂದಲೂ "ಕಥನ" ಕ್ರಿಯೆಯು ಒಂದು ಬಹುಮುಖ್ಯ ತಂತ್ರವಾಗಿ, ವಿನ್ಯಾಸವಾಗಿ ಕೆಲಸ ಮಾಡಿದೆ. ಅದರಲ್ಲೂ ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ನವೋದಯದ ಕಾಲವನ್ನು ಕನ್ನಡ ಸಾಹಿತ್ಯದ ಸುವರ್ಣಯುಗ ಎಂದು ಕರೆದರೆ ತಪ್ಪಾಗಲಾರದು. ಏಕೆಂದರೆ ಸಾಹಿತ್ಯದ ವಿವಿಧ ಪ್ರಕಾರಗಳು ಮೈದುಂಬಿ ತಮ್ಮ ಪ್ರತಿಷ್ಠೆಯ ಪರಾಕಾಷ್ಠೆಯನ್ನು ಮುಟ್ಟಿದ್ದು ನವೋದಯದ ಸಂದರ್ಭದಲ್ಲಿ. ಪ್ರಾಚೀನ ಸಾಹಿತ್ಯದಲ್ಲಿ ಕಾವ್ಯರೂಪಕ್ಕೆ ಮಾತ್ರ ಒತ್ತನ್ನು ನೀಡಲಾಗಿತ್ತು. ಅಷ್ಟೇ ಅಲ್ಲದೆ ಕಾವ್ಯರೂಪವು ಸಾಮಾನ್ಯ ಜನರ ಕೈಗೆ ಎಟುಕುವ ಸಾಹಿತ್ಯವೂ ಆಗಿರಲಿಲ್ಲ. ಕೇವಲ ಪಂಡಿತರಿಗೆ ಮಾತ್ರ ಅದು ಸೀಮಿತವಾಗಿತ್ತು. ಇಂತಹ ಒಂದು ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಗಳಿಗೊಳಗಾದ ನವೋದಯದ ಸಾಹಿತಿಗಳು ಹಳೆಯ ಪರಂಪರೆಯನ್ನು ಅರ್ಥಮಾಡಿಕೊಳ್ಳುತ್ತಾ, ಹೊಸ ಸಾಹಿತ್ಯರೂಪಗಳಿಗೆ ದಾರಿಮಾಡಿಕೊಟ್ಟರು. ಆ ನಿಟ್ಟಿನಲ್ಲಿ ಕವಿತೆ, ನಾಟಕ, ಕಾದಂಬರಿ ಸಣ್ಣಕತೆ, ಜೀವನ ಚರಿತ್ರೆ, ಆತ್ಮಚರಿತ್ರೆ, ನೀಳ್ಗತೆಗಳು, ಪ್ರಬಂಧ ಹೀಗೆ ಹತ್ತು ಹಲವು ಸಾಹಿತ್ಯ ಪ್ರಕಾರಗಳು ಬೆಳಕಿಗೆ ಬಂದವು.

ಮಾಸ್ತಿ, ಕುವೆಂಪು, ಬೇಂದ್ರೆ. ಕಾರಂತ, [illegible] ಶ್ರೀರಂಗ, ಕೈಲಾಸಂ ಹೀಗೆ ಶ್ರೇಷ್ಠ ಮಟ್ಟದ ಸಾಹಿತಿಗಳನ್ನು ನವೋದಯದ ಕಾಲ ಘಟ್ಟದಲ್ಲಿ ಗುರುತಿಸಲಾಯಿತು. ಜ್ಞಾನಪೀಠ ಪ್ರಶಸ್ತಿಗಳು ಅತಿ ಹೆಚ್ಚಿಗೆ ಬಂದದ್ದು ಸಹ ನವೋದಯ ಕಾಲಘಟ್ಟದ ಸಾಹಿತಿಗಳಿಗೆ ಎನ್ನುವುದು ವಿಶೇಷ. ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ ಮುಂತಾದವರು ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯವನ್ನು ರಚಿಸಲು ಮುಂದಾದರು. ಏಕ ರೂಪದ ಸಾಹಿತ್ಯ ಪ್ರಕಾರವನ್ನು ಬಿಟ್ಟು ಕವನ, ಕಥೆ, ಕಾದಂಬರಿ, ನಾಟಕ ಮುಂತಾದುವುಗಳನ್ನು ತಮ್ಮ ಅಭಿವ್ಯಕ್ತಿಯ ಮಾರ್ಗಗಳನ್ನಾಗಿಸಿಕೊಂಡರು. ಕುವೆಂಪುರವರು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಮೂಲಕ ಹೊಸ ಪರಿವರ್ತನೆಯನ್ನು ಸಾಹಿತ್ಯ ವಲಯದಲ್ಲಿ ತಂದರು. ಬೇಂದ್ರೆ ವಿಶೇಷವಾಗಿ ಭಾವಪ್ರಧಾನತೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದರು. ಕಾರಂತರು ವೈಚಾರಿಕತೆ ಹಾಗೂ ವೈಜ್ಞಾನಿಕತೆಗೆ ಪ್ರಾಮುಖ್ಯತೆಯನ್ನು ನೀಡಿದರೆ, ಮಾಸ್ತಿಯವರು ಕಥೆಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡಿ, ಕನ್ನಡ ಸಣ್ಣಕತೆಗಳ ಜನಕರಾದರು.

'ಮಾಸ್ತಿ ಕನ್ನಡದ ಆಸ್ತಿ', 'ಸಣ್ಣಕತೆಗಳ ಜನಕ', ಎಂಬಂತಹ ಮಾತುಗಳು ಅವರ ಜೀವನ ಮತ್ತು ಬರವಣಿಗೆಗಳನ್ನು ಕಂಡವರಿಗೆ ಉತ್ಪ್ರೇಕ್ಷೆಯಾಗಿ ತೋರುವುದಿಲ್ಲ. ಅವರ ಕೃತಿಗಳು ದೊಡ್ಡವು. ಅದಕ್ಕಿಂತ ಹೆಚ್ಚಾಗಿ ಅವರ ಬದಕು ದೊಡ್ಡದು. ಅವರ ಬದುಕಿನ

ಬಹುಮುಖವಾದ ಅನುಭವ ಅವರ ಕೃತಿಗಳಿಗೆ ವಿಷಯವನ್ನೂ, ವಿಲಾಸವನ್ನೂ, ಸಫಲತೆಯನ್ನೂ ತಂದುಕೊಟ್ಟಿದೆ. ಮಾಸ್ತಿಯವರದು ಸಂಪ್ರದಾಯನಿಷ್ಠ ಮಧುರ ಮನೋವೃತ್ತಿಯ ನಡವಳಿಕೆ.

ತಮ್ಮ ಬರವಣಿಗೆಯಿಂದ ಮಾಸ್ತಿಯವರು ಪೂರ್ಣ ಮನುಷ್ಯರಾಗಿ ಬಾಳಿದ್ದಾರೆ. ಅವರ ಓದಿನ ವಿಸ್ತಾರವನ್ನು, ಬರಹದ ವ್ಯಾಪಕತೆಯನ್ನೂ ವಿವರಿಸುವುದು ನನ್ನ ಅಳತೆಗೆ ಮೀರಿದ ಸಾಹಸವಾಗುತ್ತದೆ. ಅವರ ಬರವಣಿಗೆಯಲ್ಲಿ ಕಂಡುಬರುವ ವೈವಿಧ್ಯ, ಪ್ರತಿಭಾಪೂರ್ಣ ಅಭಿವ್ಯಕ್ತಿ ಅಸಾಧಾರಣವಾದುದು. ಆದರೆ ಒಂದು ವಿಷಯವಂತೂ ಸ್ಪಷ್ಟ. ಅವರ ಎಲ್ಲ ಚಿಂತನೆಗಳು ಗ್ರಂಥರೂಪದಲ್ಲಿ ಪ್ರಕಟವಾಗಿರುವುದು ಕನ್ನಡಿಗರ ಪುಣ್ಯ. ಕನ್ನಡದ ಅನೇಕ ಕವಿಗಳು, ಲೇಖಕರು ಮಾಸ್ತಿಯವರಿಂದ ಸ್ಫೂರ್ತಿಯನ್ನು ಪಡೆದಿದ್ದಾರೆ. ಜ್ಞಾನ, ಅನುಭವ, ಸಾಧನೆ, ವಯಸ್ಸು – ಹೀಗೆ ಯಾವುದನ್ನು ತೆಗೆದುಕೊಂಡರೂ ಮಾಸ್ತಿಯವರು ದೊಡ್ಡವರು. ಕನ್ನಡದಲ್ಲಿ ಸಣ್ಣ ಕಥೆ ಎಂದರೆ ಮಾಸ್ತಿ ಎನ್ನುವಷ್ಟು ಮಟ್ಟಿಗೆ ಅವರ ಕಥಾ ಸೃಷ್ಟಿಯ ಹಿರಿಮೆ ಜನಜನಿತವಾಗಿದೆ. ಸಣ್ಣಕತೆಯ ಪ್ರಕಾರದಲ್ಲಿ ಅವರದು ಎಷ್ಟು ಉನ್ನತಮಟ್ಟದ ಸಾಧನೆಯೆಂಬುದನ್ನು ಅವರ ಕಥೆಗಳೇ ನಿದರ್ಶಿಸಬಲ್ಲವು. ಮಾಸ್ತಿಯವರನ್ನು ಸಣ್ಣ ಕಥೆಗಳ ಜನಕ ಎಂದು ಕರೆದ ಮಾತ್ರಕ್ಕೆ ಅವರು ಸಣ್ಣ ಕಥೆಗಳನ್ನಷ್ಟೇ ಸೃಷ್ಟಿಸಿದರು ಎಂದರ್ಥವಲ್ಲ. ಮಾಸ್ತಿಯವರ ಕೈಯಿಂದ ಎಲ್ಲ ಸಾಹಿತ್ಯ ಪ್ರಕಾರಗಳು ಸಮೃದ್ಧವಾಗಿ ಬೆಳೆದವು. 'ಚೆನ್ನಬಸವನಾಯಕ', ಮತ್ತು 'ಚಿಕವೀರ ರಾಜೇಂದ್ರ' ಎಂಬ ಕಾದಂಬರಿಗಳು ಮಾಸ್ತಿಯವರ ಐತಿಹಾಸಿಕ ದೃಷ್ಟಿಯನ್ನು ಪ್ರತಿಬಿಂಬಿಸುತ್ತವೆ. ಸುಬ್ಬಣ್ಣ ಮತ್ತು ಶೇಷಮ್ಮ ಇವೆರಡು ಅವರ ಸಾಮಾಜಿಕ ಕಾದಂಬರಿಗಳು. ಮಾಸ್ತಿಯವರ ಈ ನಾಲ್ಕು ಕಾದಂಬರಿಗಳು ವ್ಯಕ್ತಿಗಳ ಹೆಸರನ್ನೇ ಪಡೆದಿರುವುದು ಒಂದು ವಿಶೇಷ.

ಶ್ರೀನಿವಾಸರು ಕಾವ್ಯ ರಚನೆಯಲ್ಲೂ ಕೈಯಾಡಿಸಿದ್ದಾರೆ. ೧೯೨೨ ರಿಂದ ಹೆಚ್ಚೂ ಕಡಿಮೆ ಅವರು ಮರಣ ಹೊಂದುವವರೆಗೂ ಆ ದಾರಿಯಲ್ಲಿ ನಡೆದಿದ್ದಾರೆ. ಮಾಸ್ತಿ ಸುಮಾರು ಹದಿನೈದಕ್ಕೂ ಮಿಕ್ಕು ಕವಿತಾ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ 'ರಾಮನವಮಿ', 'ಗೌಡರಮಲ್ಲಿ', 'ಮೂಕನ ಮಕ್ಕಳು', 'ಬಿನ್ನಹ', 'ಅರುಣ', 'ತಾವರೆ', 'ಸುನೀತಾ', 'ಮಲಾರ' ಮೊದಲಾದವು ಮಾಸ್ತಿಯವರ ಅಸಾಮಾನ್ಯ ಸಂಸ್ಕಾರವನ್ನೂ, ಅನುಭವವನ್ನೂ ತೋರಿಸಬಲ್ಲ ಶಕ್ತಿಯನ್ನು ಪಡೆದಿವೆ. ಕವನಗಳಲ್ಲಿ ಮಾಸ್ತಿಯವರು ತೋರುವ ದೃಷ್ಟಿ ಧಾರ್ಮಿಕವಾದದ್ದು, ಆಧ್ಯಾತ್ಮಿಕವಾದದ್ದು. ಅದು ಧರ್ಮ ಸಹಿಷ್ಣುತೆಯ ವಿಶಾಲ್ಯದಲ್ಲಿ ಅಡಕಗೊಂಡ ಉದಾರವಾದಿ ದೃಷ್ಟಿ. ಭಾಷೆಯು ಹದದಿಂದ ಅರ್ಥಾನುಸಾರಿಯಾದ ಶುದ್ಧಗತಿಯಿಂದ ಸಾಗುವ ಅವರ ಕವನಗಳು ಶಬ್ದಲಯದ ಮೂಲಕವೇ ಓದುಗನಲ್ಲಿ ಭಾವ ಪ್ರಬೋಧನೆಯನ್ನು ಉಂಟು ಮಾಡಬಲ್ಲವು.

ಮಾಸ್ತಿ ಕಾವ್ಯ ಹಾಗೂ ಕಥಾ ಸಾಹಿತ್ಯದ ಜೊತೆಗೆ ನಾಟಕಗಳನ್ನೂ ರಚಿಸಿದ್ದಾರೆ. 'ಶಿವಛತ್ರಪತಿ', 'ತಾಳಿಕೋಟೆ', 'ಉಷಾ', 'ಸಾವಿತ್ರಿ', 'ಕಾಕನಕೋಟೆ' 'ಯಶೋಧರಾ' ಮೊದಲಾದ ನಾಟಕಗಳಲ್ಲಿ ಗದ್ಯದ ಜೊತೆಗೆ ಹಾಡು ಅಥವಾ ಪದ್ಯಗಳೂ ಇವೆ. ಮಾಸ್ತಿಯವರ ವಿಮರ್ಶಾ ಕೃತಿಗಳಲ್ಲಿ 'ಆದಿಕವಿ ವಾಲ್ಮೀಕಿ', 'ಭಾರತತೀರ್ಥ', 'ವೈಷ್ಣವ ದಾಸರ ಕೀರ್ತನೆಗಳು', 'ಮೇಘ ಸಂದೇಶ' ಮುಂತಾದವು ಆ ಪ್ರಕಾರದ ವಿಮರ್ಶಾ ವ್ಯಾಪ್ತಿಯನ್ನು ವಿಸ್ತರಿಸುವಲ್ಲಿ ಯಶಸ್ವಿಯಾಗಿವೆ. ಅನೇಕ ಉಪನ್ಯಾಸಗಳು, ಪ್ರಬಂಧಗಳು, ಜೀವನ ಚರಿತ್ರೆ ಮೊದಲಾದವನ್ನು ರಚಿಸಿರುವ ಮಾಸ್ತಿ 'ಭಾವ' ಎಂಬ ಮೂರು ಸಂಪುಟಗಳ ಆತ್ಮಚರಿತ್ರೆಯನ್ನು ಬರೆದಿದ್ದಾರೆ.

'ಮಾಸ್ತಿ ಅವರ ಸಮಗ್ರ ಕತೆಗಳು', ಸಂಪುಟ – ೧ ರ ಮುನ್ನುಡಿಯಲ್ಲಿ ಮಾವಿನಕೆರೆ ರಂಗನಾಥನ್ ವೆಂಕಟೇಶ್ ~~ಐ~~ಂಗಾರ್ ರವರ ಜೀವನ ಸಾಧಾನೆಗಳನ್ನು ಕುರಿತು ಈ ರೀತಿ ಹೇಳುತ್ತಾರೆ. ಅಯ್ಯ

"ತೀರದ ಮರಳಿನಲ್ಲಿ ಕುಳಿತವರು ಎದುರಿಗೆ ಕಣ್ಣು ತುಂಬುವಂತೆ ಭೋರ್ಗರೆಯುತ್ತಿರುವ ಅನಂತ ಸಾಗರವನ್ನು ಕಂಡು, ನಾವು ಅದನ್ನು ಸಂಪೂರ್ಣವಾಗಿ ಪರಿಚಯ ಮಾಡಿಕೊಂಡೆವು ಎಂದರೆ ಅದೊಂದು ಭ್ರಾಂತಿ ಅಷ್ಟೆ. ದಿಗಂತದವರೆಗೆ ಹಬ್ಬಿದ ಸಾಗರ ತನ್ನ ಅಸಂಖ್ಯಾತ ತೆರೆಗಳೊಡನೆ ತುಯ್ಯುತ್ತ, ನೊರೆ ಚೆಲ್ಲುವಂತೆ ತೀರಕ್ಕೆ ಅಪ್ಪಳಿಸುವುದನ್ನು ನೋಡುವುದೇ ಒಂದು ಅನುಭವ. ಈಗ ಶಾಂತ, ಮತ್ತೊಮ್ಮೆ ಗಂಭೀರ, ಮಗದೊಮ್ಮೆ ರುದ್ರರಮಣೀಯ ಎನ್ನಿಸುವಂತೆ ಕಾಲಕಾಲಕ್ಕೆ ತನ್ನ ಸ್ವರೂಪವನ್ನು ಬದಲಾಯಿಸುವ ಸಾಗರ ಎಷ್ಟು ಅನಂತವೋ ಅದರೊಳಗಿನ ಜಗತ್ತೂ ಅಷ್ಟೇ ಅಪಾರ, ನಿಗೂಢ. ಸಾಗರದೊಡಲಿನ ವಸ್ತು, ಜೀವರಾಶಿ ಬರಿಗಣ್ಣಿಗೆ ಕಾಣಿಸುವುದಿಲ್ಲ. ಮತ್ತೆ ಆ ಜಗತ್ತಿನ ವ್ಯಾಪ್ತಿ – ವೈವಿಧ್ಯಗಳೂ ಪ್ರಜ್ಞೆಯ ಅಳವಿಗೆ ಮೀರಿದಂಥವು. ಕನ್ನಡ ಸಾಹಿತ್ಯದಲ್ಲಿ ಅಜರಾಮರೆನಿಸುವ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಶ್ರೀನಿವಾಸ) ಅವರನ್ನು ನೆನೆದಾಗಲೆಲ್ಲ ಸಹಜವಾಗಿಯೇ ಸಾಗರದ ಪ್ರತಿಮೆ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಅವರ ಜೀವನ, ಸಾಧನೆ, ಸಿದ್ಧಿಗಳು ಸಾಗರದಷ್ಟು ವಿಶಾಲವೂ ವ್ಯಾಪಕವೂ ಆಗಿವೆಯೆಂದರೆ ಅದು ಅತಿಶಯದ ಮಾತೇನಲ್ಲ".

ಮಾಸ್ತಿ ಬದುಕಿನ ಪ್ರತಿಯೊಂದನ್ನೂ ತೀರಾ ಸಾಮಾನ್ಯವಾದ ವ್ಯಕ್ತಿಗಳ ಸನ್ನಿವೇಶಗಳನ್ನು ಅತ್ಯಂತ ಶ್ರದ್ಧೆಯಿಂದ, ಧಾರ್ಮಿಕ ದೃಷ್ಟಿಯಿಂದ ನೋಡುವ, ವ್ಯಾಖ್ಯಾನಿಸುವ, ಪ್ರತಿಂಯೊಂದನ್ನೂ ಅತ್ಯಂತ ಜವಾಬ್ದಾರಿಯಿಂದ ಬೆಲೆ ಕಟ್ಟುವ ಸಾತ್ವಿಕ ಮನೋಭಾವವುಳ್ಳವರು. ನಮ್ಮ ಸಂಸ್ಕೃತಿ, ಜೀವನ ಮೌಲ್ಯಗಳ ಬಗ್ಗೆ ಅಪಾರ ಗೌರವ, ಅಗಾಧ ಶ್ರದ್ಧೆ ನಂಬಿಕೆ ಇಟ್ಟುಕೊಂಡಿರುವ ಮಾಸ್ತಿ ತಮ್ಮ ಜೀವನದಲ್ಲಿ ಅವೆಲ್ಲವನ್ನು ಅಳವಡಿಸಿಕೊಂಡರು. ತಮ್ಮ ಕತೆಗಳಲ್ಲಿ, ಪಾತ್ರಗಳಲ್ಲಿ ಇವುಗಳ ಹುಡುಕಾಟವನ್ನು ಸೂಕ್ಷ್ಮವಾಗಿ ಸೂಚಿಸುವರು.

ಮಾಸ್ತಿಯವರು ಸುಮಾರು ಎಪ್ಪತ್ತೈದು ವರ್ಷಗಳ ಕಾಲ ಸಾಹಿತ್ಯ ರಚನೆ ಮಾಡಿದರು. ಸಣ್ಣಕಥೆ, ಕಾದಬಂರಿ, ನಾಟಕ, ಕಾವ್ಯ, ವಿಚಾರಸಾಹಿತ್ಯ, ಸಾಹಿತ್ಯ ವಿಮರ್ಶೆ 'ಜೀವನಸ್ಮೃತಿಗಳು', 'ಜೀವನ' ಪತ್ರಿಕೆಯ ಸಂಪಾದಕೀಯಗಳು, ಅನುವಾದಗಳು ಎಲ್ಲಾ ಸೇರಿ ಸುಮಾರು ಇಪ್ಪತ್ತು ಸಾವಿರ ಪುಟಗಳಷ್ಟು ಕನ್ನಡ, ಇಂಗ್ಲೀಷ್ ಬರೆಹ ಅವರ ಲೇಖನಿಯಿಂದ ಮೂಡಿ ಬಂತು. ಈ ಬರೆಹದ ಹಿಂದೆ ಪ್ರತಿಭೆಗೆ ಪ್ರೇರಣೆಯಾಗಿ ವಿಶಾಲವಾದ ಲೋಕಾನುಭವವಿದೆ. ವಿಸ್ತಾರವಾದ ಅಧ್ಯಯನವಿದೆ.

ನನಗೆ ಕನ್ನಡ ಕಥಾ ಸಾಹಿತ್ಯವನ್ನು ಕುರಿತು ವಿಶೇಷವಾಗಿ ಅಧ್ಯಯನ ಮಾಡಬೇಕೆಂಬ ಆಸೆ ಬಹುದಿನಗಳಿಂದಲೂ ಇತ್ತು. ಆ ನಿಟ್ಟಿನಲ್ಲಿ ಮಾಸ್ತಿಯವರ ಸಣ್ಣಕತೆಗಳನ್ನು ಅಧ್ಯಯನ ಮಾಡಬೇಕೆಂಬ ಉದ್ದೇಶವನ್ನಿಟ್ಟುಕೊಂಡೇ ಎಂ.ಫಿಲ್ ಪದವಿಗಾಗಿ ಅಧ್ಯಯನಕ್ಕೆ ತೊಡಗುವ ಮೂಲಕ ಮಾಸ್ತಿಯವರ ಕಥಾಸಾಹಿತ್ಯದ ವೈವಿಧ್ಯವನ್ನು ತಿಳಿಯಲು ಒಂದು ಭೂಮಿಕೆಯು ಸಿದ್ಧಮಾಡಿಕೊಂಡೆ.

ನನಗೆ ಮಾಸ್ತಿಯವರ ಕೆಲವು ಸಣ್ಣ ಕತೆಗಳನ್ನು ಎಂದೋ ಓದಿದ ನೆನಪಿತ್ತು. ಅವರ ಕತೆಗಳಲ್ಲಿ ವ್ಯಕ್ತವಾಗುವ ಜೀವನದ ಅನುಭವ, ನಿರೂಪಣಾ ತಂತ್ರಗಳು, ಪಾತ್ರ ಚಿತ್ರಣಗಳ ವಿಶೇಷತೆ, ಭಾಷೆಯ ಸರಳತೆ ತುಂಬಾ ಹಿಡಿಸಿತು. ಮಾಸ್ತಿಯವರು ನಮ್ಮ ಜಿಲ್ಲೆಯವರೇ ಆಗಿರುವುದರಿಂದ ಅವರ ಕತೆಗಳಲ್ಲಿ ವ್ಯಕ್ತವಾಗಿರುವ ಭಾಷೆ ಸ್ಥಳೀಯ ಭಾಷೆಯೂ ಆಗಿರುವುದರಿಂದ ನನ್ನ ಅಧ್ಯಯನಕ್ಕೆ ಸೂಕ್ತವೆಂದು ಕಾಣಿಸಿತು. ಮಾಸ್ತಿಯವರ ಬಹುತೇಕ ಕತೆಗಳಲ್ಲಿ ಹಳ್ಳಿಗಳಲ್ಲಿ ಇಂದಿಗೂ ಬಳಕೆಯಲ್ಲಿರುವ ಮುಗ್ಧ ಭಾಷೆಯನ್ನು ಕಾಣಬಹುದು. ಅದಕ್ಕೆ ಉತ್ತಮ ಉದಾಹರಣೆಯಾಗಿ 'ಮೊಸರಿನ ಮಂಗಮ್ಮ', ಜೋಗ್ಯೋರ ಅಂಜಪ್ಪನ ಕೋಳೀ ಕಥೆ', 'ವೆಂಕಟಶಾಮಿಯ ಪ್ರಣಯ' ಮುಂತಾದ ಕಥೆಗಳನ್ನು ನೋಡಬಹುದು.

ಕಥನ ಸಾಹಿತ್ಯದ ಕಾಣ್ಕೆಯು ಸಾಂಸ್ಕೃತಿಕ ಹಾಗೂ ಮನುಷ್ಯನ ವ್ಯಕ್ತಿಗತ ಸಮಸ್ಯೆ ಸಂಬಂಧಗಳನ್ನು ಕಟ್ಟಿಕೊಡುವ ಕೆಲಸವನ್ನು ಎದುರಾಗಿಸಿದೆ. ಇಂತಹ ಸಾಹಿತ್ಯವಿಶಿಷ್ಟತೆಯ ನೆಲೆಗಳು ವೇದ್ಯವಾಗಬೇಕಾದರೆ ವ್ಯವಸ್ಥಿತ ಅಧ್ಯಯನದಿಂದ ಸಾಧ್ಯ ಎಂಬುದು ಯಾರಾದರೂ ಒಪ್ಪುವಂತಹ ಮಾತಾಗಿದೆ. ಈ ಹಿನ್ನೆಲೆಯಲ್ಲಿ ಮಾಸ್ತಿಯವರ ಕಥಾ ಸಾಹಿತ್ಯವನ್ನು ವಿಶ್ಲೇಷಣೆಗೆ ಒಡ್ಡುವುದು ಈ ಅಧ್ಯಯನದ ಮುಖ್ಯ ಗುರಿಯಾಗಿದೆ. ಮಾಸ್ತಿಯವರ ಕಥೆಗಳನ್ನು ನನ್ನ ಅಧ್ಯಯನದ ವಸ್ತುವಾಗಿಟ್ಟುಕೊಂಡಾಗ ಕೆಲವು ಪ್ರಶ್ನೆಗಳು ಎದುರಾಗಿದ್ದು ಸಹಜ. ಈಗಾಗಲೇ ಅನೇಕ ಲೇಖಕರು ಮಾಸ್ತಿಯವರ ಕತೆಗಳನ್ನು ಕುರಿತು

ವಿಮರ್ಶಿಸಿದ್ದಾರೆ. ಆ ವಿಮರ್ಶೆಗಳನ್ನು ಆಧಾರವಾಗಿಟ್ಟುಕೊಂಡು ಅಲ್ಲಿ ಹೇಳಿರದ ಸಂಗತಿಗಳನ್ನು ಹುಡುಕಬೇಕೆಂಬ ಹಂಬಲ, ಕುತೂಹಲಗಳು ಮೂಡಿದವು. ಈ ಉದ್ದೇಶದಿಂದ ಮಾಸ್ತಿಯವರ ಕತೆಗಳನ್ನು ನನ್ನ ಅಧ್ಯಯನದ ವಿಷಯವಾಗಿಸಿಕೊಂಡಿದ್ದೇನೆ.

ಗಾತ್ರದಲ್ಲೂ ಪಾತ್ರದಲ್ಲೂ ಮಾಸ್ತಿಯವರ ಕಥಾ ವ್ಯಾಪ್ತಿ ಕಣ್ಮನಗಳನ್ನು ಕೋರೈಸುವಂಥದು. ೧೯೧೦ ರ ಸುಮಾರಿಗೆ ಅವರ 'ರಂಗನ ಮದುವೆ ಪ್ರಕಟವಾಯಿತು. ಆ ನಂತರ ಸುಮಾರು ಏಳೆಂಟು ದಶಕಗಳ ಕಾಲ ಅವರು ಸಣ್ಣ ಕಥಾ ಪ್ರಕಾರಕ್ಕೆ ಒಂದು ನಿಶ್ಚಿತ ರೂಪವನ್ನು ಕೊಟ್ಟದ್ದೇ ಅಲ್ಲದೆ, ಸಣ್ಣಕತೆಯ ಸಾಧ್ಯತೆಗಳನ್ನು ಹಿಗ್ಗಿಸಿ, ಸಾಹಿತ್ಯದಲ್ಲಿ ಅದಕ್ಕೊಂದು ಶಾಶ್ವತ ಸ್ಥಾನವನ್ನು ದೊರಕಿಸಿಕೊಟ್ಟರು. 'ರಂಗನ ಮದುವೆ' ಕತೆಯಿಂದ ಹಿಡಿದು 'ಮಾಯಣ್ಣನ ಕನ್ನಡಿ' ಕತೆಯವರೆಗೆ ಸುಮಾರು ೧೦೦ ಸಣ್ಣಕತೆಗಳನ್ನು ಮಾಸ್ತಿಯವರು ಕನ್ನಡ ಸಾಹಿತ್ಯಲೋಕಕ್ಕೆ ಕಾಣಿಕೆಯಾಗಿ ನೀಡಿದ್ದಾರೆ. ಆ ಸಂಖ್ಯೆಯೊಂದೇ ಸಾಕು ಮಾಸ್ತಿಯವರ ಕಥಾ ಸಾಹಿತ್ಯದ ವಿಸ್ತಾರವನ್ನು ತೋರಿಸಲು. ಜೊತೆಗೆ ಕಥೆಗಳ ವಸ್ತು ವ್ಯಾಪ್ತಿ, ರೀತಿ ವೈವಿಧ್ಯ, ನಿರೂಪಣಾ ವೈವಿಧ್ಯತೆಗಳು ಅವುಗಳೆಲ್ಲವನ್ನೂ ಅನಾದೃಶ್ಯವಾಗಿ ಸೆರೆಹಿಡಿದು ಸಂಯೋಜಿಸಿರುವ ರೀತಿ, ಅಸಾದಾರಣವಾದ ಕಥನ ಕೌಶಲ ಎಂಥಹವರನ್ನೂ ಸಹ ಆಕರ್ಷಿಸುತ್ತವೆ.

ಮಾಸ್ತಿಯವರ ಕತೆಗಳಲ್ಲಿ ಸಾಮಾಜಿಕ ಕತೆಗಳಿವೆ, ಐತಿಹಾಸಿಕ ಕತೆಗಳಿವೆ. ಪೌರಾಣಿಕ ಕತೆಗಳಿವೆ, ಕಲ್ಪನಾತ್ಮಕ ಕತೆಗಳಿವೆ. ಪತ್ರರೂಪದಲ್ಲಿ, ದಿನಚರಿ ರೂಪದಲ್ಲಿ, ಸಂವಾದ ರೂಪದಲ್ಲಿ, ಕನಸಿನ ರೂಪದಲ್ಲಿ – ಎಷ್ಟೋ ರೂಪಗಳಲ್ಲಿ ಕತೆಗಳನ್ನು ರಚಿಸಿದ್ದಾರೆ. ಇವೆಲ್ಲಕ್ಕೂ ಅವರ ಸಹಾನುಭೂತಿಪರವಾದ ಶ್ರದ್ಧೆ, ವಿಶಾಲವಾದ ಜೀವನಾನುಭವ, ಆಸಕ್ತಿ, ಅಭಿರುಚಿಗಳು ಹಿನ್ನೆಲೆಯನ್ನೊದಗಿಸಿವೆ.

ಪ್ರಸ್ತುತ ಅಧ್ಯಯನದಲ್ಲಿ ಮಾಸ್ತಿಯವರ ಎಲ್ಲ ಕತೆಗಳನ್ನು ಚರ್ಚಿಸುವುದಾಗಲಿ, ವಿಶ್ಲೇಷಿಸುವುದಾಗಲಿ ಅಸಾಧ್ಯವಾಗಿರುವುದರಿಂದ ಅವರ ಕತೆಗಳಲ್ಲಿ ರೂಪತಾಳಿರುವ 'ಸ್ತ್ರೀ' ಪಾತ್ರಗಳಿಗೆ ವಿಶೇಷ ಒತ್ತನ್ನು ನೀಡಿ, ಆ ನಿಟ್ಟಿನಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ನನ್ನ ಅಧ್ಯಯನದ ವ್ಯಾಪ್ತಿಯನ್ನು 'ಸ್ತ್ರೀ' ಪಾತ್ರಗಳ ಅನಾವರಣಕ್ಕೆ ಸೀಮಿತಗೊಳಿಸಿಕೊಂಡಿರುತ್ತೇನೆ. ಮಾಸ್ತಿಯವರ ಒಟ್ಟಾರೆಯ ಸಣ್ಣ ಕತೆಗಳನ್ನು 'ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್' ನವರು ಐದು ಸಂಪುಟಗಳಲ್ಲಿ ಹೊರತಂದಿದ್ದಾರೆ. ಆ ಐದೂ ಸಂಪುಟಗಳು ನನ್ನ ನಿಬಂಧ ರಚನೆಗೆ ಆಕರ ಗ್ರಂಥಗಳಾಗಿವೆ. ಪ್ರಸ್ತುತ ಸಾದರಪಡಿಸಬೇಕೆಂದಿರುವ ನಿಬಂಧದಲ್ಲಿ 'ಸ್ತ್ರೀ' ಪಾತ್ರಗಳನ್ನು ಕುರಿತು ಅಧ್ಯಯನ ಕೈಗೊಂಡಿರುವುದರಿಂದ 'ಸ್ತ್ರೀ' ವಾದಿ ನಿಲುವುಗಳೇನು? ಎಂಬುದನ್ನು ಮೊದಲು

ಅರ್ಥಮಾಡಿಕೊಂಡು ಆ ನಿಟ್ಟಿನಲ್ಲಿ ನನ್ನ ಅಧ್ಯಯನ ಸಾಗಬೇಕಾಗಿರುವುದರಿಂದ 'ಸ್ತ್ರೀ' ವಾದಿ ಚಿಂತನೆಗಳು ಸಹ ನನ್ನ ನಿಬಂಧನೆಯ ವ್ಯಾಪ್ತಿಯೊಳಗೆ ಬರುತ್ತವೆ. ಒಟ್ಟಾರೆಯಾಗಿ ಮಾಸ್ತಿಯವರ ಕತೆಗಳಲ್ಲಿ ವ್ಯಕ್ತವಾಗಿರುವ 'ಸ್ತ್ರೀ' ಪಾತ್ರಗಳ ವೈವಿಧ್ಯತೆಯನ್ನು ಅವರ ಕತೆಗಳ ಪರಿಶೀಲನೆಯಿಂದ ಶೋಧಿಸಿಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶ ಮತ್ತು ಯತ್ನವಾಗಿದೆ.

## ಮಾಸ್ತಿಯವರ ಕಥಾ ನಿರೂಪಣಾ ತಂತ್ರ

ಕಥೆ ಎನ್ನುವುದು ಮಾನವ ಸ್ವಭಾವ ಸಹಜವಾದ, ಕುತೂಹಲ ಮತ್ತು ಕಲ್ಪನೆಗಳ ಫಲವಾಗಿ ಇಡೀ ಜಗತ್ತಿನ ಎಲ್ಲಾ ಸಾಹಿತ್ಯಗಳಲ್ಲೂ ಮೂಡಿ ಬಂದಿದೆ. ಆಯಾ ದೇಶದ ಭಾವನೆ, ಕಲ್ಪನೆ, ಸಂಸ್ಕೃತಿ, ಪರಿಸರ ಮತ್ತು ಅನುಭವಗಳಿಗನುಗುಣವಾಗಿ ಕಥೆಗಳು ರಚನೆಯಾಗಿ ಕುತೂಹಲವನ್ನು ತಣಿಸಿ ಮನೋರಂಜನೆಯನ್ನೊದಗಿಸಿವೆ. ನಮಗೆ ದೊರೆತಿರುವ ಅತಿ ಪ್ರಾಚೀನ ಸಣ್ಣಕತೆ, ಬಹುಶಃ ಕ್ರಿ.ಪೂ. 3200ರ ಸುಮಾರಿನದು. ಈಜಿಪ್ಟ್ ಭಾಷೆಯ "ದಿ ಟೂ ಬ್ರದರ್ಸ್" ಎಂಬುದು. ನಮ್ಮ ದೇಶದ ವೇದ ಉಪನಿಷತ್ತುಗಳಲ್ಲಿ, ಮಹಾಭಾರತ, ರಾಮಾಯಣಗಳಲ್ಲಿ ಕಥೆಗಳು ಪ್ರಧಾನ ಪಾತ್ರ ವಹಿಸಿವೆ. ಜಾತಕ ಕತೆಗಳು, ಪಂಚತಂತ್ರ, ಕಥಾ ಸರಿತ್ಸಾಗರ ಮುಂತಾದುವುಗಳು ಕಥೆಯ ಭಂಡಾರಗಳೇ ಆಗಿವೆ. ಆದರೆ ಕನ್ನಡದಲ್ಲಿ ಸಮೃದ್ಧಿಯಾಗಿ ಸಣ್ಣಕತೆಗಳು ಸೃಷ್ಟಿಯಾಗತೊಡಗಿದ್ದು, ನವೋದಯ ಕಾಲಘಟ್ಟದಲ್ಲಿ. ಈ ಒಂದು ಸಂದರ್ಭದಲ್ಲಿ ಪಂಜೆ ಮಂಗೇಶರಾಯರು, ಎಂ.ಎನ್. ಕಾಮತ್, ಕೆರೂರು ವಾಸುದೇವಾಚಾರ್ಯ ಮೊದಲಾದವರು ಸಣ್ಣ ಕತೆಗಳನ್ನು ಬರೆದರೆಂಬುದು ಐತಿಹಾಸಿಕ ಸತ್ಯ. ಆದರೆ ಆ ಪ್ರಕಾರದ ರೂಪುರೇಷೆಗಳನ್ನೂ ವ್ಯಾಪಕ ಮಹತ್ವವನ್ನೂ ಗುರುತಿಸಿ, 'ಕತೆ ಎಂದರೆ ಇದು' ಎಂದು ಹೇಳುವಷ್ಟರ ಮಟ್ಟಿಗೆ ಜೀವನಾನುಭವದ ರಸಘಟ್ಟಿಗಳನ್ನೇ ನಿರ್ಮಿಸಿ, ಅವುಗಳಿಗೆ ಪ್ರಾಣ ಸಂಚಾರವಾದ ಧ್ವನಿಶಕ್ತಿಯನ್ನು ನೀಡಿದವರು ಮಾಸ್ತಿಯವರೇ. ಈ ಕಾರಣದಿಂದ ಅವರು ಸಹಜವಾಗಿಯೇ 'ಕನ್ನಡ ಸಣ್ಣಕತೆಯ ಜನಕ' ರೆನಿಸಿದರು.

ಸಣ್ಣಕಥಾ ಸಾಹಿತ್ಯ ಪ್ರಕಾರ ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ನಮಗೆ ದತ್ತವಾಗಿದೆ. ಬಂಗಾಳದ ಬಾಗಿಲಿನಿಂದ ಭಾರತವನ್ನು ಪ್ರವೇಶಿಸಿದ ಈ ಪ್ರಕಾರ ಕನ್ನಡದಲ್ಲೂ ಬಹುಬೇಗನೆ ಜನಪ್ರಿಯವಾಯಿತು. ಪಂಜೆಯವರು, ಕೆರೂರು ವಾಸುದೇವಾಚಾರ್ಯರು ಮೊದಮೊದಲು ಕತೆಗಳನ್ನು ಬರೆದರೂ, ಅದರ ಜೀವನ ನಾಡಿಯನ್ನು ಮಿಡಿದು ಅದರ ಸರ್ವ ವೈವಿಧ್ಯವನ್ನೂ ಸಮಗ್ರವಾಗಿ, ಸಶಕ್ತವಾಗಿ ಕನ್ನಡದಲ್ಲಿ ಮೂಡಿಸಿ ಕನ್ನಡ ಸಣ್ಣಕತೆಯ ಮಹೋನ್ನತ್ತಿಯನ್ನು ಮೆರೆಸಿ, ಆ ಪ್ರಕಾರಕ್ಕೂ ಅಭಿವ್ಯಕ್ತಿಯ ಸಾಮರ್ಥ್ಯ ಶಕ್ತಿ ಇದೆ ಎನ್ನುವುದನ್ನು ತೋರಿಸಿಕೊಟ್ಟವರು ಆಚಾರ್ಯಪುರುಷರಾದ ಶ್ರೀನಿವಾಸರು. ಸಣ್ಣ ಕತೆಯ ಪ್ರಕಾರಕ್ಕೆ ಸಂಬಂಧಿಸಿದಂತೆ ಮಾಸ್ತಿಯವರದು ಅನುಪಮ ಸಾಧನೆ. ಸಾಹಿತ್ಯದ ಅಭ್ಯಾಸಿಗಳಿಗೆ ತಿಳಿದಿರುವಂತೆ ಅವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ್ದು, ಸಣ್ಣಕತೆಯ ರಚನೆಯಿಂದಲೇ. 1909 ರ ಸುಮಾರಿಗೆ ಅವರ ಮೊಟ್ಟಮೊದಲ ಕತೆ 'ರಂಗನ ಮದುವೆ' ಪ್ರಕಟವಾಯಿತು. ಆ ನಂತರ ಸುಮಾರು ಏಳೆಂಟು ದಶಕಗಳ ಕಾಲ ಅವರು ಈ ಪ್ರಕಾರಕ್ಕೆ ಒಂದು ನಿಶ್ಚಿತ

ರೂಪವನ್ನು ಕೊಟ್ಟದ್ದೇ ಅಲ್ಲದೆ, ಸಣ್ಣ ಕತೆಯ ಸಾಧ್ಯತೆಗಳನ್ನು ಹಿಗ್ಗಿಸಿ, ಸಾಹಿತ್ಯದಲ್ಲಿ ಅದಕ್ಕೊಂದು ಶಾಶ್ವತ ಸ್ಥಾನವನ್ನು ಗಳಿಸಿಕೊಟ್ಟರು. ಮಾಸ್ತಿಯವರ ಪ್ರತಿಭೆ ಇತರ ಸಾಹಿತ್ಯ ರೂಪಗಳಿಗೆ ಹೊಂದಿಕೊಂಡದ್ದಕ್ಕಿಂತ ಹೆಚ್ಚಾಗಿ ಸಣ್ಣ ಕತೆಗೆ ಹೊಂದಿಕೊಂಡಿದೆ. ಕೇವಲ ಗಾತ್ರವೊಂದನ್ನೇ ಲೆಕ್ಕಕ್ಕೆ ತೆಗೆದುಕೊಂಡರೂ ಅವರ ಬರವಣಿಗೆಯಲ್ಲಿ ಸಣ್ಣ ಕತೆಗೆ ಮೊದಲ ಸ್ಥಾನ ಸಲ್ಲಬೇಕಾಗುತ್ತೆ. ಸಣ್ಣ ಕಥೆ ಅವರಿಗಾಗಿ ಕನ್ನಡದಲ್ಲಿ ಕಾಯುತ್ತಿತ್ತು ಎಂದು ಕಾಣುತ್ತದೆ. ಅಂತಹ ಸಾಧನೆ ಅವರದು. ವಸ್ತು ವೈವಿದ್ಯ, ಪಾತ್ರ ವೈವಿಧ್ಯ, ತಂತ್ರ ವೈವಿಧ್ಯದಲ್ಲಿ ಅವರ ಅದ್ಭುತ ಪ್ರತಿಭೆಯನ್ನು ನೋಡಬಹುದು.

ಕಥನನಿರೂಪಣಾತಂತ್ರದ ದೃಷ್ಟಿಯಿಂದ ಮಾಸ್ತಿಯವರ ಕಥೆಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಒಂದು ಗುಂಪಿನ ಕಥೆಗಳಲ್ಲಿ ಯಾರೋ ಇನ್ನೊಬ್ಬರು ತಮಗೆ ಹೇಳಿದ ಕತೆಯನ್ನು ತಾವು ತಿರುಗಿ ಓದುಗರಿಗೆ ಹೇಳುತ್ತಿರುವಂತೆ ಕತೆಗಳಿದ್ದರೆ, ಇನ್ನೊಂದು ಗುಂಪಿನ ಕತೆಗಳಲ್ಲಿ ಮಾಸ್ತಿಯವರು ನೇರವಾಗಿ ತಾವೇ ಕತೆ ಹೇಳುವಂತಿದೆ. ಮತ್ತೊಂದು ಗುಂಪಿನ ಕತೆಗಳಲ್ಲಿ ಯಾರೋ ಬರೆದಿಟ್ಟು ಹೋಗಿರುವ ಡೈರಿಯ ವಿಷಯವನ್ನು ಭಾಷಾಂತರಗೊಳಿಸಿ ಕಥಾರೂಪವನ್ನಾಗಿಸಿರುವುದನ್ನು ಕಾಣಬಹುದು. ಈ ಮೂರು ಗುಂಪಿನ ಕಥೆಗಳಲ್ಲಿ ಮತ್ತೆ ಸಾಮಾಜಿಕ ಕತೆಗಳು, ಪೌರಾಣಿಕ ಕತೆಗಳು, ಐತಿಹಾಸಿಕ ಕತೆಗಳು, ಮಹಾ ಚೇತನದ ವ್ಯಕ್ತಿತ್ವದ ಕತೆಗಳು ಎಂದು ವಿಭಾಗಿಸುವುದುಂಟು.

ಮೊದಲನೆಯ ಗುಂಪಿನ ಕತೆಗಳು ಇನ್ನೊಬ್ಬರಿಂದ ಕೇಳಿ ಹೇಳಿದ ರೀತಿಯಲ್ಲಿ ಒಂದೇ ಬಗೆಯಾಗಿ ಕಂಡರೂ ಅವುಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಕೆಲವು ಉದಾಹರಣೆಗಳನ್ನು ನೋಡಬಹುದು.

೧ "ಸುಬೇದಾರರ ಪ್ಯಾದೇಮಾತಿನ ರಾಮಣ್ಣನವರಿಗೆ ನಾನು, ನನಗೆ ನಿಮ್ಮ ಕಡೆ ಸಣ್ಣ ಒಂದು ಕಾಫಿ ತೋಟವನ್ನು ಕೊಡಿಸಿಕೊಡಿ, ಎಂದು ಹೇಳಿದ್ದೆನು. ಅವರು, ತಮ್ಮ ಪರಿಚಯದ ಒಬ್ಬ ಗೌಡರು ಯಾವನೋ ಆಂಗ್ಲೇಯ ಪ್ಲಾಂಟರನ ಒಂದು ತೋಟವನ್ನು ಮಾರುವುದರಲ್ಲಿದ್ದಾರೆ. ಅದನ್ನು ಬಂದು ನೋಡಬಹುದು, ಎಂದು ನನಗೆ ಪತ್ರ ಬರೆದರು. ನಾನು ಇಂಥ ದಿನ ಬರುತ್ತೇನೆಂದು ಅವರಿಗೆ ತಿಳಿಸಿ ಆ ತೋಟವನ್ನು ನೋಡುವುದಕ್ಕೆ ಹೊರಟೆನು. ನಾನು ರೈಲು ಇಳಿಯುವ ಹೊತ್ತಿಗೆ ರಾಮಣ್ಣನವರು ನನ್ನನ್ನು ಕಂಡು ನನ್ನೊಡನೆಯೇ ಬಂದರು. ಮಂಜಲಗೆರೆ ಮೂಡಲಪುರದ ಮಧ್ಯೆ ಒಂದು ಗುಡ್ಡದ ಮೇಲೆ ಆ ತೋಟ, ಅದರ ಪಕ್ಕದ ತೋಟ ರಾಮಣ್ಣನವರ ಪರಿಚಯದ ಗೌಡರದು. ಗೌಡರು ನಮ್ಮನ್ನು ಆದರದಿಂದ ಬರಮಾಡಿಕೊಂಡರು. ವ್ಯಾಪಾರಕ್ಕೆ ಬಂದಿದ್ದ ಆ ತೋಟದ ಕತೆಯನ್ನು ಹೇಳಿದರು. ಜೊತೆಗೆ ತಮ್ಮನ್ನು ಕುರಿತು ಕೆಲವು ಸಂಗತಿಗಳನ್ನು ಅರುಹಿದರು"[1].(ಸೋರಲೀ ಪ್ರಸಂಗ)

---

1. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ – ೨(ಎಂಜೆವಿಕೆ ಟ್ರಸ್ಟ್, ಬೆಂಗಳೂರು–೧೯೯೦) ಪು.ಸಂ.೫೬

* * *

2. "ಕಳೆದವಾರ ನಾನು ಪುರೋಹಿತನೊಂದಿಗೆ ಶ್ರೀರಾಮ್ ಮನೆಗೆ ಹೋಗಿದ್ದೆನು. ಮದುವೆ, ನೀತಿ, ಸಾಮಾಜಿಕ ಕ್ರೌರ್ಯ, ಮುಂತಾದ ಮಾತು ಸಹಜವಾಗಿ ಬಂದವು ಬಹು ವಯಸ್ಸಾದ ಮನುಷ್ಯರು ಕಿರಿವಯಸ್ಸಿನ ಹೆಣ್ಣುಗಳನ್ನು ಮದುವೆಯಾಗುವ ವಿಷಯ ಪ್ರಸ್ತಾಪಕ್ಕೆ ಬಂದು ಶ್ರೀರಾಮ್ ತಮಗೆ ತಿಳಿದ ಒಬ್ಬ ದೊಡ್ಡ ಮನುಷ್ಯರಿಂದ ತಾವು ಕೇಳಿದ ಒಂದು ಸಂಗತಿಯನ್ನು ನಮಗೆ ಹೇಳಿದರು".[2]('ಚಿಕ್ಕವ್ವ')

* * *

3. "ನನ್ನ ಪರಿಚಯದ ಪೋಲೀಸ್ ಅಧಿಕಾರಿಯೊಬ್ಬರು ನನಗೆ ಈ ಕಥೆಯನ್ನು ಹೇಳಿದರು.

○ ○ ○

ಈಗ್ಗೆ ಸುಮಾರು ನಲವತ್ತು ವರ್ಷಗಳ ಹಿಂದೆ ನಾನು ನಗರದ ಕೋರ್ಟ್ ಒಂದರಲ್ಲಿ ಪ್ರಾಸಿಕ್ಯೂಟಿಂಗ್ ಇನ್ಸ್‌ಪೆಕ್ಟರ್ ಆಗಿ ಇದ್ದೆ. ಆಗ ನಗರದ ಒಂದು ಭಾಗದ ಪೋಲೀಸ್ ಇನ್ಸ್‌ಪೆಕ್ಟರು ಕೋರ್ಟಿನಲ್ಲಿ ಒಬ್ಬ ತರುಣನ ಮೇಲೆ ಆಪಾದನೆ ಮಾಡಿ ಒಂದು ಮೊಕದ್ದಮೆಯನ್ನು ತಂದರು. ಅದರಲ್ಲಿ ಸಾಕ್ಷಿಗಳನ್ನು ವಿಚಾರಿಸಿ ಮ್ಯಾಜಿಸ್ಟ್ರೇಟರಿಗೆ ವಿವರಗಳನ್ನು ತಿಳಿಸುವ ಕೆಲಸ ನನ್ನದಾಯಿತು. ಆಗ ನನ್ನ ಗಮನಕ್ಕೆ ಬಂದ ದುರಂತ ಕಥೆ ಇದು".[3] ('ದುರದೃಷ್ಟದ ಹೆಣ್ಣು')

* * *

4. "ರಂಗಪ್ಪ "ಹಾಗಾದ ಮೇಲೆ ಏನು ಸಮಾಚಾರ ಸರಿಯಾಗಿ ಹೇಳಿ ಬಿಡು ಕೇಳೋಣಂತೆ" ಎಂದ ಆಂಜಪ್ಪ ಹೇಳಿದ.

○ ○ ○

ಇದು ನಡೆದದ್ದು ಸುಮರು ನಲವತ್ತು ವರ್ಷದ ಹಿಂದೆ ಇರಬಹುದು. ಆಗ್ಗೆ ಆಂಜಪ್ಪನಿಗೆ ಮಧ್ಯ ವಯಸ್ಸು, ಆಗಿನ ದಿವಸಕ್ಕೆ ಅವನು ತನ್ನ ಕಸುಬಿಗಾಗಿ ಊರು ಊರು ಸುತ್ತುತ್ತಾ ಇದ್ದ"[4] ('ಜೋಗ್ಯೋರ ಅಂಜಪ್ಪನ ಕೋಳಿಕಥೆ')

* * *

2. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು. ಸಂಪುಟ – ೧(ಎಂಜಿಪಿಕೆ ಟ್ರಸ್ಟ್. ಬೆಂಗಳೂರು–೧೯೯೦) ಪು.ಸಂ.೬೨
3. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು. ಸಂಪುಟ – ೫(ಎಂಜಿಪಿಕೆ ಟ್ರಸ್ಟ್. ಬೆಂಗಳೂರು–೧೯೯೦) ಪು.ಸಂ.೨೬
4. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು. ಸಂಪುಟ – ೨(ಎಂಜಿಪಿಕೆ ಟ್ರಸ್ಟ್. ಬೆಂಗಳೂರು–೧೯೯೦) ಪು.ಸಂ.೫೯

5. "ನಾನೂ ರಾಮರಾಯರೂ ಒಂದು ಸಲ ಜೊತೆಯಾಗಿ ಪ್ರಯಾಣ ಮಾಡುತ್ತಿದ್ದಾಗ ಪಿಶಾಚಿಗಳನ್ನು ಕುರಿತ ಮಾತು ಬಂದಿತು. ಆ ಕಥೆ ಈ ಕಥೆಯ ಮಾತನಾಡುತ್ತ ರಾಮರಾಯರು ಅವರ ಸ್ನೇಹಿತರೊಬ್ಬರು ತೀರ್ಥಹಳ್ಳಿಯ ಪ್ರಾಂತ್ಯದಲ್ಲಿದ್ದಾಗ ಕೇಳಿದ ಒಂದು ಕಥೆಯನ್ನು ಹೇಳಿದರು. ಅದನ್ನು ನಿಮಗೆ ಹೇಳುತ್ತೇನೆ.[5] ('ಮಲೆನಾಡಿನ ಒಂದು ಪಿಶಾಚ')

ಮೊದಲನೆಯ ಉದಾಹರಣೆಯಲ್ಲಿಯ ಕಥೆ "ಸೋರಲೀ ಪ್ರಸಂಗ"ದ್ದು. ಇಲ್ಲಿ ಸುಬೇದಾರರ ಪ್ಯಾದೇಮಾತಿನ ರಾಮಣ್ಣ ಹಾಗೂ ನಾನು (ಕಥಾ ನಿರೂಪಕ) ಪರಿಚಯದ ಗೌಡರಲ್ಲಿಗೆ ಹೋದಾಗ, ವ್ಯಾಪಾರಕ್ಕೆ ಬಂದಿದ್ದ ಆ ತೋಟದ ಕಥೆಯನ್ನು ಗೌಡರು ಹೇಳಿದರು. ಕಥೆಯ ಕೊನೆಗೆ ರಾಮಣ್ಣನವರು ಚಾರ್ಲಿಯ ಬಗ್ಗೆ ಚರ್ಚಿಸುತ್ತಾರೆ. ನಿರೂಪಕ ಏನನ್ನೂ ಹೇಳುವುದಿಲ್ಲ. ಎರಡನೆಯ ಉದಾಹರಣೆಯಲ್ಲಿಯ ಕತೆಯನ್ನು ಹೇಳುತ್ತಿರುವವರು ಮೂಲದಲ್ಲಿ 'ಒಬ್ಬ ದೊಡ್ಡ ಮನುಷ್ಯರು, ಅವರು ಹೇಳಿದ ಕಥೆಯನ್ನು ಆ ದೊಡ್ಡ ಮನುಷ್ಯರೇ ಹೇಳಿದಂತೆ, ಅವರ ಮಾತಿನಲ್ಲಿಯೇ ಶ್ರೀರಾಮ್ ಹೇಳುತ್ತಾರೆ. ಅದನ್ನು ಕೇಳಿದ ನಿರೂಪಕ ಹಾಗೇ ನಮಗೆ ಹೇಳುತ್ತಾನೆ. ಕೊನೆಗೆ ಓದುಗರಾದ ನಮಗೆ ಕಥೆ ಬರುವುದು ಆ ದೊಡ್ಡ ಮನುಷ್ಯರ ಬಾಯಿಂದ ಎಂಬಂತೆ. ಇಲ್ಲಿ ಕಥೆ ಮೂರು ಬಾಯಿ ದಾಟಿ ಬರುತ್ತದೆ. ಮೂರನೆಯ ಉದಾಹರಣೆಯ ಕತೆಯನ್ನು ಹೇಳುವುದು ಒಬ್ಬ ಪೋಲೀಸ್ ಅಧಿಕಾರಿ. ಅವನು ತನ್ನ ಅಧಿಕಾರದ ಅವಧಿಯಲ್ಲಿ ಘಟಿಸಿರುವಂತಹ ಒಂದು ದುರಂತ ಕಥೆಯನ್ನು ಹೇಳುತ್ತಾರೆ. ಇಲ್ಲಿ ಪೋಲೀಸ್ ಅಧಿಕಾರಿಯೇ ಕಥೆಯನ್ನು ಮುಂದುವರೆಸುವ ರೀತಿ ಇದೆ. ಕತೆಯ ಕೊನೆಗೂ ಸಹ ಮೂಲಕಥಾ ನಿರೂಪಕ ಯಾವುದೇ ಮಾತನ್ನಾಡುವುದಿಲ್ಲ. ನಾಲ್ಕನೆಯ ಉದಾಹರಣೆಯಲ್ಲಿ ಕಥೆ ಅಂಜಪ್ಪನದು. ಹೇಳಿದ್ದೂ ಅವನೇ. ಕೇಳಿದವರು ರಂಗಪ್ಪ ಮತ್ತು 'ನಾನು' ಎಂಬ ನಿರೂಪಕ. ನಮಗೆ ಕಥೆ ಹೇಳುತ್ತಿರುವವನು ಈ 'ನಾನು' ಎಂಬಾತ. ಆದರೆ ಹೇಳಿರುವುದು ಅಂಜಪ್ಪನ ದೃಷ್ಟಿಕೋನದಿಂದ. ಹೀಗಾಗಿ ಕಥಾ ನಿರೂಪಣೆಯ ಭಾಷೆಗೆ ಅಂಜಪ್ಪನ ಅಸಲು ಮಾತಿನ ಶೈಲಿಯ ಬಣ್ಣ ಬಂದಿರುವುದೂ ಉಂಟು. ಐದನೆಯ ಉದಾಹರಣೆಯಲ್ಲಿ ಕಥೆಯ ಮೂಲ ಯಾವುದೇ ಒಬ್ಬ ವ್ಯಕ್ತಿಯಲ್ಲ, ಒಂದು ಪ್ರಾಂತ್ಯ. ಆ ಸುತ್ತಿನಲ್ಲಿ ಹಲವರ ಬಾಯಲ್ಲಿ ಪ್ರಚಲಿತವಿದ್ದ ಕಥೆಯೊಂದನ್ನು ಕೇಳಿದ್ದ ರಾಮರಾಯರ ಸ್ನೇಹಿತರೊಬ್ಬರು ಅದನ್ನು ರಾಮರಾಯರಿಗೆ ಹೇಳಿದ್ದಾರೆ. ರಾಮರಾಯರು 'ನಾನು' ಎಂಬ ನಿರೂಪಕನಿಗೆ ಹೇಳುತ್ತಾರೆ. ನಿರೂಪಕ ತನ್ನ ಮಾತಿನಲ್ಲಿ ನಮಗೆ ಹೇಳುತ್ತಾನೆ. ಇಲ್ಲಿ ಕಥೆ ನಾಲ್ಕು ಮುಖದಿಂದ ಬಂದಂತಾಯಿತು. ಈ ರೀತಿಯ ಕಥಾ ನಿರೂಪಣಾ ತಂತ್ರವನ್ನು ನಾವು ಮಾಸ್ತಿಯವರಲ್ಲಿ ನೋಡಲು ಸಾಧ್ಯ.

---

5. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ – ೨(ಎಂಜಿವಿಕೆ ಟ್ರಸ್ಟ್, ಬೆಂಗಳೂರು–೧೯೯೦) ಪು.ಸಂ.೪೩

– ಎರಡನೇ ಗುಂಪಿನ ಕಥೆಗಳಲ್ಲಿ ಮಾಸ್ತಿಯವರೇ ನೇರ ನಿರೂಪಕನ ಸ್ಥಾನದಲ್ಲಿ ನಿಲ್ಲುತ್ತಾರೆ. ಮಾಸ್ತಿಯವರ ಒಟ್ಟು ಕತೆಗಳಲ್ಲಿ ಬಹುಪಾಲು ಕಥೆಗಳು ನೇರ ನಿರೂಪಣಾ ತಂತ್ರವನ್ನು ಒಳಗೊಂಡಿರುವಂತಹವು. ಆದರೂ ನಿರೂಪಣೆಯ ರೀತಿಯಲ್ಲಿ ಮಾಸ್ತಿಯವರು ವೈವಿಧ್ಯವನ್ನು ಅಡಕಗೊಳಿಸಿದ್ದಾರೆ. ನೇರ ನಿರೂಪಣೆಯ ಕಥೆಗಳಿಗೆ ಕೆಲವು ಉದಾಹರಣೆಗಳನ್ನು ನೋಡಬಹುದು.

1. "ಕಾಮನಹಬ್ಬದ ದಿನ ಬಂದರೆ ನನಗೆ ನಮ್ಮೂರ ಸಾವಿತ್ರಮ್ಮನವರ ಕಥೆ ಜ್ಞಾಪಕಕ್ಕೆ ಬರುತ್ತದೆ. ಈ ಹಬ್ಬ ಎಂದರೆ ಹಿಂದೆ ನಮ್ಮೂರಲ್ಲಿ ಮಹಾ ವಿಜೃಂಭಣೆ. -------------------- ನಾನು ಕೊನೆಯ ಸಲ ಕಾಮನಹಬ್ಬದ ಗಲಭೆಯಲ್ಲಿ ಸೇರಿದ್ದಾಗ ಸಾವಿತ್ರಮ್ಮನವರ ವ್ರತವೂ ಕೊನೆಯಾಯಿತು. ಅವರ ಆ ವ್ರತದ ವಿಚಾರವನ್ನೇ ನಾನು ಈಗ ನಿಮಗೆ ಹೇಳಬೇಕೆಂದಿರುವುದು".[6] ('ಕಾಮನ ಹಬ್ಬದ ಒಂದು ಕಥೆ')

2. "ಆ ದಿನ ಗುರುವಾರ, ಸ್ಕೂಲಿಗೆ ಹೋಗುವುದಕ್ಕೆ ಹೊತ್ತಾಗಿ ಹೋಯಿತಲ್ಲಾ ಎಂದು ಅವಸರವಸರವಾಗಿ ಬರುತ್ತಾ ಇದ್ದೆ. ಲಕ್ಷ್ಮಿ ನನ್ನ ಹಿಂದೆ ಬರುತ್ತಾ ಇದ್ದಳು; ಪುಟ್ಟ ಪುಟ್ಟ ಕಾಲನ್ನು ದಡದಡನೆ ಹಾಕುತ್ತಾ ಓಡಿ ಬರುತ್ತಿದ್ದಳು. ಹೊತ್ತಾಯಿತಲ್ಲಾ, ಲಕ್ಷ್ಮಿಯನ್ನು ಕರೆದುಕೊಂಡು ಹೋಗೋಣ, ಎಂದು ನಾನು ಹೋಗಿ ಕರೆಯುವ ಹೊತ್ತಿಗೆ ಅವಳು ಇನ್ನು ಎದ್ದೇ ಇರಲಿಲ್ಲ. ಅದರಿಂದ ಇನ್ನಷ್ಟು ಹೊತ್ತಾಯಿತು. ಹೀಗೆ ಹೋಗುತ್ತಾ ಇರುವಾಗ, ನಮ್ಮ ಎದುರಿಗೆ ಸ್ವಲ್ಪ ದೂರದಲ್ಲಿ ಮೇಷ್ಟರು ಸಾವಕಾಶವಾಗಿ ನಡೆಯುತ್ತಾ ಸ್ಕೂಲಿಗೆ ಹೋಗುತ್ತಾ ಇದ್ದರು. ಮೇಷ್ಟರೇ ಈಗ ಹೋಗುವಾಗ ನಮಗೇನು ಸ್ಕೂಲಿನಲ್ಲಿ ಅವಸರ ಎಂದು ನಾನು ಮೆಲ್ಲಗೆ ನಡೆಯುವುದಕ್ಕೆ ಆರಂಭಿಸಿದೆ". 7 ('ನನ್ನ ಮೇಷ್ಟರು')

ಮೂರನೇ ಗುಂಪಿನ ಕಥೆಗಳಲ್ಲಿ ಯಾರೋ ಎಂದೋ ಬರೆದಿಟ್ಟಿರುವ ದಿನಚರಿಯ ವಿಷಯವನ್ನು ಭಾಷಾಂತರಗೊಳಿಸುವ ರೀತಿಯಲ್ಲಿ ಕಥೆಯನ್ನು ಕಟ್ಟಿಕೊಡುತ್ತಾರೆ. ಕತೆಯನ್ನು ಮೂಲದಲ್ಲಿರುವಂತೆ ಕನ್ನಡದಲ್ಲಿ ಹೇಳುತ್ತಿದ್ದೇನೆ ಎಂದು ನಿರೂಪಕ ಸ್ಪಷ್ಟೀಕರಿಸುತ್ತಾರೆ. ಈ ರೀತಿಯ ಕಥೆಗಳಿಗೆ ಕೆಲವು ಉದಾಹರಣೆಗಳನ್ನು ನೋಡಬಹುದು.

1. "ನಮ್ಮ ತಾತಂದಿರು ಕೊರ್ಟ್ನೇ ಈ ಸಾಹೇಬನ ಬಳಿ ಜೋಡಿಶಾಲು ಶಿರಸ್ತೆಯ ಕೆಲಸದಲ್ಲಿದ್ದರು. ಈಚೆಗೆ ನಮ್ಮ ಮನೆಯಲ್ಲಿರುವ ಹಳೆಯ ದಫ್ತರಗಳನ್ನೆಲ್ಲಾ ಪರಿಶೋಧಿಸಿ ಕೆಲಸಕ್ಕೆ ಬಾರದ ಕಾಗದಗಳನ್ನು ಹಾಕೋಣವೆಂದು ಎಲ್ಲವನ್ನು ಕೊಡವಿದೆನು. ಈ ದಫ್ತರಗಳಲ್ಲಿ ಕೆಲವು ನಮ್ಮ ತಾತಂದಿರ ಕಾಲದ ಕಾಗದ ಪತ್ರಗಳು. ಇವುಗಳಲ್ಲಿ ಕೋರ್ಟ್ನೇಸಾಹೇಬನು ಬರೆದ ಒಂದು ಡಯರಿಯ ಕೊಂಚ ಭಾಗ ಸಿಕ್ಕಿತು. ಕೋರ್ಟ್ನೇ ಸಾಹೇಬನನ್ನು ನಾನು ನೋಡಿದ್ದೆನು.

---

6. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ – ೨(ಎಂಜೆಪಿಕೆ ಟ್ರಸ್ಟ್, ಬೆಂಗಳೂರು–೧೯೮೫) ಪು.ಸಂ.೦೧
7. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ – ೧(ಎಂಜೆಪಿಕೆ ಟ್ರಸ್ಟ್, ಬೆಂಗಳೂರು–೧೯೮೫) ಪು.ಸಂ.೧೦೪

ಅವನು ಒಂದೆರಡು ಸಲ ತಿಂಡಿಯನ್ನು ಕೊಟ್ಟದ್ದೂ ಜ್ಞಾಪಕವಿದೆ. ಆತ ಬಹಳ ಒಳ್ಳೆಯ ಮನುಷ್ಯ ಡಯರಿಯಲ್ಲಿ ಏನಿರುವುದೋ ಎಂದು ನಡುವೆ ಎತ್ತಿ ಕೆಲವು ಪುಟಗಳನ್ನು ಓದಿದೆನು. ಒಂದು ದಿನದ ವಿಚಾರವನ್ನು ಸ್ವಲ್ಪ ಓದುವದರಲ್ಲಿ ತೀರಾ ಓದೋಣವೆಂದು ಆಸೆ ಹುಟ್ಟಿದ್ದರಿಂದ ಓದುತ್ತ ಕುಳಿತೆನು. ಅದು ಅಷ್ಟೇನೂ ಉದ್ದವಾಗಿಯೂ ಇರಲಿಲ್ಲ. ಕೂತ ಹಾಗೆಯೇ ಓದಿ ಮುಗಿಸಿದೆನು. ವಿಷಯ ನನಗೆ ಸ್ವಾರಸ್ಯವಾಗಿ ಕಂಡುಬಂದದ್ದರಿಂದ ಇತರರಿಗೂ ಸ್ವಾರಸ್ಯವಾಗಿರಬಹುದೆಂದು ಅದನ್ನು ಇಲ್ಲಿ ಬರೆಯುತ್ತೇನೆ".[8] ('ಇಲ್ಲಿಯ ತೀರ್ಪು')

2. "ಇದು ಕೋರ್ಟ್ಕೇ ಸಾಹೇಬನ ಡಯರಿಯ ಇನ್ನೊಂದು ಭಾಗ" [9] ('ಮಸುಮತ್ತಿ')

ಮೊದಲನೇ ಗುಂಪಿಗೆ ಸೇರಿದ ಕತೆಗಳನ್ನು ಗಮನಿಸಿದಾಗ, ಈ ನಿರೂಪಣಾತಂತ್ರ ಪ್ರಾಚೀನ ಭಾರತೀಯ ಕಾವ್ಯ – ಪುರಾಣಗಳ ನಿರೂಪಣಾತಂತ್ರವನ್ನು ನೆನಪಿಗೆ ತರುತ್ತದೆ. ನಮ್ಮ ಪ್ರಾಚೀನ ಸಾಹಿತ್ಯದ 'ಕಥಾಮುಖ' ಇದೇ ಬಗೆಯದು. ಮಹಾಭಾರತದ ಕಥೆಯನ್ನು ವ್ಯಾಸನೇ ಬರೆದನೆಂದು ಪ್ರತೀತಿ ಇದ್ದರೂ, ವ್ಯಾಸರು ಭಾರತದ ಕಥೆಯನ್ನು ತನ್ನ ಶಿಷ್ಯನಾದ ವೈಶಂಪಾಯನನಿಗೆ ಹೇಳಿದನೆಂದೂ, ಅದನ್ನು ವೈಶಂಪಾಯನನು ಜನಮೇಜಯ ರಾಜನಿಗೆ ಆತನ ಸರ್ಪಯಜ್ಞದ ಕಾಲಕ್ಕೆ ಹೇಳಿದನೆಂದೂ ಅದನ್ನು ಕೇಳಿದ ಉಗ್ರಶ್ರವನೆಂಬ ಸೂತಪುರಾಣಿಕನು ನೈಮಿಷಾರಣ್ಯದಲ್ಲಿ ನೆರದಿದ್ದ ಶೌನಕಾದಿಗಳಿಗೆ ಹೇಳಿದನೆಂದೂ ಮ ಹಾಭಾರತದ ಪೀಠಿಕೆ ಇದೆ. ಈ ರೀತಿಯ ಕಥನ ನಿರೂಪಣಾ ತಂತ್ರವನ್ನು ಮಾಸ್ತಿಯವರ ಬಹುತೇಕ ಕಥೆಗಳಲ್ಲಿ ಗುರುತಿಸಬಹುದು. ಅವರ ಎಲ್ಲಾ ಕಥೆಗಳು ಒಂದೇ ರೀತಿಯ ನಿರೂಪಣಾ ತಂತ್ರವನ್ನು ಒಳಗೊಂಡಿರುವಂತಹುವಲ್ಲ. ಮಾಸ್ತಿಯವರ ಕಥನ ನಿರೂಪಣೆಯಲ್ಲಿ ಕಥೆಯಿಂದ ಕಥೆಗೆ ವೈವಿಧ್ಯತೆಯನ್ನು ಕಾಣಬಹುದು. ನಿರೂಪಣೆಯ ವಿಧಾನದಲ್ಲೇ ವೈವಿಧ್ಯತೆಯನ್ನು ಮೆರೆಯಲು ಸಾಧ್ಯವಾಗುವುದು, ಒಬ್ಬ ಸಾಹಿತಿಯ ಅಸಾಧಾರಣ ಅನುಭವ ಹಾಗೂ ಅಭ್ಯಾಸದಿಂದ ಸಾಧ್ಯವಾಗುವಂತಹದು. ಅಂತಹ ಶಕ್ತಿ ಮಾಸ್ತಿಯವರಿಗೆ ಹುಟ್ಟಿನಿಂದಲೇ ಬಂದ ಬಳುವಳಿಯಾಗಿತ್ತು. ಆದ್ದರಿಂದಲೇ ಕನ್ನಡ ಸಾಹಿತ್ಯಲೋಕ ಅವರಿಂದ ಸುಮಾರು 100 ಸಣ್ಣ ಕತೆಗಳನ್ನು ನಿರೀಕ್ಷಿಸಲು ಸಾಧ್ಯವಾಯಿತು.

ಮಾಸ್ತಿಯವರ ಕತೆಗಳಲ್ಲಿ ಒಳಿತನ್ನು ಕುರಿತ ಕಥೆಗಳಿವೆ. ಕೆಡುಕನ್ನು ಕುರಿತ ಕಥೆಗಳಿವೆ. ಜೀವನದ ನೋವು–ನಲಿವುಗಳನ್ನು, ಹಾಸ್ಯ – ದುಃಖಗಳನ್ನು, ಪ್ರೀತಿ–ಪ್ರಣಯಗಳನ್ನು ಒಳಗೊಂಡ ಕಥೆಗಳನ್ನು ಕಾಣಬಹುದು. 'ಮನುಷ್ಯನ ಬಗ್ಗೆ ಹೇಳಹೋ:ರಟಿದ್ದೆಲ್ಲವೂ ಕಥಾನಕದ ಧಾಟಿಯನ್ನು ಪಡೆದಿದೆ'. ಆ ಮೇಲೆ ಆಯ್ದುಕೊಂಡ

---

8. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ – ೧(ಎಂಜಿಪಿಕೆ ಟ್ರಸ್ಟ್, ಬೆಂಗಳೂರು–೧೯೮೯) ಪು.ಸಂ.೦೧
9. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ – ೧(ಎಂಜಿಪಿಕೆ ಟ್ರಸ್ಟ್, ಬೆಂಗಳೂರು–೧೯೮೯) ಪು.ಸಂ.೬೦

ವಸ್ತುವನ್ನು ನಿಭಾಯಿಸಲು ಅವರು ಅನುಸರಿಸುವ ಕ್ರಮವನ್ನು ವಿಮರ್ಶಕ ಡಾ.ಎಂ.ಜಿ. ಕೃಷ್ಣಮೂರ್ತಿ ಸಮರ್ಪಕವಾಗಿ ವಿವರಿಸಿದ್ದಾರೆ.

> "ಕತೆ ಮತ್ತು ನೈಜ ಜೀವನದ ಅನುಭವಗಳಿಗೆ "ದೂರ" (distence) ವೇರ್ಪಡಿಸುವುದಕ್ಕಾಗಿ ಮಾಸ್ತಿಯವರು ಕೆಲವು ತಂತ್ರಗಳನ್ನು ಉಪಯೋಗಿಸುತ್ತಾರೆ. ಅವುಗಳಲ್ಲಿ ಮುಖ್ಯವಾದವು; (1) ಕಥೆ "ನಡೆದ" ಕಾಲ ಮತ್ತು ಕಥೆ ಹೇಳುವ ಕಾಲಗಳನ್ನು ದೂವಿಡುವುದು. (2) ಕಥೆ ಹೇಳುವ ಪಾತ್ರ ಮತ್ತು ಕಥೆಗಳಲ್ಲಿ ಮುಖ್ಯಪಾತ್ರವಹಿಸುವ ಪಾತ್ರಗಳ ಜಾತಿ ವರ್ಗ ಮತ್ತು ವಯಸ್ಸುಗಳಲ್ಲಿರುವ ವ್ಯತ್ಯಾಸಗಳನ್ನು ಓದುಗನ ಗಮನಕ್ಕೆ ತರುವುದು. (2) ಜೀವನದಲ್ಲಿರುವ ನೋವಿನ ಗೂಢತೆಯನ್ನು (Mystery) ಒಪ್ಪಿಕೊಳುವುದು ಮತ್ತು ಓದುಗರು ಒಪ್ಪಿಕೊಳ್ಳುವಂತೆ ಮಾಡುವುದು ಮತ್ತು (4) ದೃಷ್ಟಿಯನ್ನು ನೋವಿನ ಮೇಲೆ ಕೇಂದ್ರೀಕರಿಸದೆ, ನೋವನ್ನು ಕೊಂಚಮಟ್ಟಿಗಾದರೂ ಅರ್ಥಮಾಡಿಕೊಳ್ಳಲು ಮತ್ತು ಒಪ್ಪಿಕೊಳ್ಳಲು ಸಹಾಯ ಮಾಡುವ ಸಾಂಸ್ಕೃತಿಕ ಮೌಲ್ಯಗಳ ಮೇಲೆ ಕೇಂದ್ರೀಕರಿಸುವುದು. ಇವುಗಳಲ್ಲಿ ಮೊದಲನೆಯ ಎರಡು ತಂತ್ರಕ್ಕೆ ಸಂಬಂಧಿಸಿದುದಾದರೆ, ಕೊನೆಯ ಎರಡು ಮಾಸ್ತಿಯವರ ಸಂವೇದನಾಶೀಲತೆಗೆ ಸಂಬಂಧಿಸಿದುದಾಗಿವೆ".[10]

ಮಾಸ್ತಿಯವರು ಕತೆಗಾರರಾಗಿ ಈ ರೀತಿಯ ತಂತ್ರಗಳನ್ನು, ಇಂಥ ಸಂವೇದನಾ ಶೀಲತೆಯನ್ನು ಅವರು ಎಂದೂ ಬಿಟ್ಟುಕೊಡಲಿಲ್ಲ. ಅವರು ಮೇಲು ಕೀಳೆನ್ನದೆ ಎಲ್ಲಾ ಮನುಷ್ಯರಲ್ಲೂ ಉದಾತ್ತ ಚೇತನವನ್ನು ಕಂಡರು. ಆದ್ದರಿಂದಲೇ ಇಬ್ಬರು ಗಂಡಸರೊಂದಿಗೆ ಸುಖಿಸಿ ಮೂರನೆಯವನನ್ನು ಮದುವೆಯಾದ ಚಾಟ್‌ಲೈಟ್ ಪ್ರಭುವಿ, ಲೈಂಗಿಕ ಸ್ವೇಚ್ಛೆಯಿಂದ ಮೆರೆದು, ಕೊನೆಗೆ ಒಬ್ಬನಿಂದ ಅಂಥ ಸುಖಪಡೆಯದೆ ಹೋದ ಇಸಾಡೋರಾ ಡಂಕನ್, ತನ್ನ ಮುಂದೆಯೇ ಬೇರೊಬ್ಬನನ್ನು ಮೆಚ್ಚಿಕೊಂಡ ಹೆಂಡತಿಯ ಬಗ್ಗೆ ಯೋಚಿಸಿದ ವೆಂಕಟಿಗ, ತನ್ನ ಸ್ನೇಹಿತ ಕೇಳಿದ ಅನ್ಯೋ ಕಾರಣಕ್ಕೆ ಸ್ವಂತ ಹೆಂಡತಿಯನ್ನೇ ಅವನಿಗೆ ಒಪ್ಪಿಸಿದ ಸಂಯಮಿ ಕೇಟೋ, ಮೊದಲಾದವರಲ್ಲೂ ಅವರು ದೊಡ್ಡತನವನ್ನು ಕಾಣುವುದು ಸಾಧ್ಯವಾಯಿತು.

ಮಾಸ್ತಿಯವರ ನಿಲುವು ಎಷ್ಟು ದೃಢ, ನಿಸ್ಸಂದಿಗ್ಧ, ಬರವಣಿಗೆ ಎಷ್ಟು ಸರಳ, ಪಾರದರ್ಶಕ ಎಂದರೆ, ಇದರ ಅರ್ಥ ಇಷ್ಟೇ ಎನ್ನುವಂತೆ ಎಷ್ಟೋ ಸಲ ಕಥೆ ತನ್ನ ಅರ್ಥಕ್ಕೆ ತಾನೇ ಮಿತಿ ಹಾಕಿಕೊಳ್ಳುತ್ತದೆ ಎನಿಸುತ್ತದೆ. ಮಾಸ್ತಿ ಕಥಾ ಪರಂಪರೆ ಎಂದರೆ ಕೇವಲ ಕಥೆ ಹೇಳುವ ರೀತಿಯಲ್ಲ; ಜೀವನವನ್ನು ಕಾಣುವ ದೃಷ್ಟಿಯೂ ಹೌದು. ಮಾಸ್ತಿಯವರಿಗೆ ಬದುಕಿನಲ್ಲಿಯ ಜೀವಪರವಾದ ಶಕ್ತಿಗಳ ಬಗ್ಗೆ ಗೌರವವಿದೆ. ಉದಾರವಾದ ಭಾರತೀಯ ಮನಸ್ಸಿನಿಂದ ಅವರು ಸಂಗತಿಗಳನ್ನು ಗ್ರಹಿಸಿದ್ದಾರೆ. ಬದುಕಿನಲ್ಲಿ ನೋವು,

---

10. ಎಂ.ಜಿ. ಕೃಷ್ಣಮೂರ್ತಿ : ಮಾಸ್ತಿಯವರ ಸಣ್ಣಕತೆಗಳು, ಶತಮಾನದ ಸಾಹಿತ್ಯ ವಿಮರ್ಶೆ, ಸಂ: ಎಚ್.ಎಸ್. ರಾಘವೇಂದ್ರರಾವ್ (ಕರ್ನಾಟಕ ಸಾಹಿತ್ಯ ಅಕಾಡಮಿ ಕನ್ನಡ ಭವನ ೨೦೦೧) ಪು.ಸಂ. ೪೧೭

ಕೇಡಕು, ದುಃಖ ಇವೆ. ಆದರೆ ಇವುಗಳ ನಡುವೆಯೂ ಬದುಕನ್ನು ಕಹಿಮಾಡಿಕೊಳ್ಳದೆ ನೋವನ್ನು ಗೆಲ್ಲುವುದು ಹೇಗೆ ಎಂಬುದರಲ್ಲಿಯೇ ಅವರಿಗೆ ಹೆಚ್ಚಿನ ಆಸಕ್ತಿ ಇದೆ. ವೈಯಕ್ತಿಕ ಸ್ಥೈರ್ಯದಿಂದ, ಅಂತಃಶ್ಯಕ್ತಿಯಿಂದ ನೋವನ್ನು ಗೆಲ್ಲಬಹುದೆಂಬ ವಿಶ್ವಾಸ ಅವರ ಕತೆಗಳಲ್ಲಿ ಎದ್ದು ಕಾಣುತ್ತದೆ. ಸಣ್ಣಕತೆಯ ರೂಪವನ್ನು ಬಳಸಿಕೊಂಡ ಅವರ ರೀತಿಯಲ್ಲಿಯೇ ಇದನ್ನು ಕಾಣಬಹುದು. ಈ ದೃಷ್ಟಿಯಿಂದ ಸಂಪ್ರದಾಯ ಹಾಗೂ ಆಧುನಿಕತೆಗಳ ಉಪಯುಕ್ತ ಸಮನ್ವಯವಾಗಿ ಕಥನತಂತ್ರ ಹಾಗೂ ಜೀವನ ದೃಷ್ಟಿಗಳಲ್ಲಿ ಅವರ ಸಣ್ಣಕತೆ ಗಣನೀಯ ಕೆಲಸ ಮಾಡಿದೆ. ಆ ಮೂಲಕ ಕನ್ನಡ ಸಣ್ಣಕತೆಯಲ್ಲಿ ತನ್ನದೇ ಆದ ಸಂಪ್ರದಾಯವೊಂದನ್ನು ನಿರ್ಮಿಸಿದೆ.

ಯು.ಆರ್. ಅನಂತಮೂರ್ತಿಯವರು ಮಾಸ್ತಿಯವರ ಕತೆಗಳನ್ನು ಕುರಿತು ಸಮಕ್ಷಮ ಎಂಬ ಕೃತಿಯಲ್ಲಿ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸುತ್ತಾರೆ.

> "ಪ್ರಾಯಕ್ಕೆ ಬರುತ್ತಿರುವ ಮಕ್ಕಳಿಗೆ ಯಾವನಾದರೂ ಒಬ್ಬ ಕನ್ನಡ ಲೇಖಕನನ್ನು ಓದಲು ಕೊಡಬೇಕೆಂದು ಅನ್ನಿಸುವುದಾದರೆ ಅದು ಮಾಸ್ತಿ ಎಂದು ನನ್ನ ಭಾವನೆ. ಜೀವನದ ನಿಜಗಳೇನು, ನೋವುಗಳೇನು, ತಾಳುವುದೆಂದರೇನು, ಗೆಲ್ಲುವುದೆಂದರೇನು ಎಂಬ ಕಷ್ಟಗಳನ್ನು ಭಾವಾತಿರೇಕವಿಲ್ಲದೆ, ಸೋಗಿಲ್ಲದೆ ಎದುರಿಸಲು ಖಂಡಿತ ಮಾಸ್ತಿ ಕಲಿಸುತ್ತಾರೆ. ನಮ್ಮ ಭಾವನಾ ಪ್ರಪಂಚವನ್ನು ಪಕ್ವವಾಗಿಸಬಲ್ಲ ಶಿಕ್ಷಣ ಅವರ ಕಥೆಗಳಿಂದ ಖಂಡಿತ ಸಿಗುತ್ತದೆ. ನಯವಾದ ಮಾತನ್ನು ಆಡುವಂತವರೆನ್ನೆಲ್ಲಾ ಅನುಮಾನದಿಂದ ನೋಡುವುದು ಸರಿಯೆನ್ನಿಸುವ ಈ ಕಾಲದಲ್ಲಿ, ಅಂಥ ಮಾತುಗಳನ್ನೇ ಆಡಿಯೂ ಪ್ರಾಮಾಣಿಕರಾಗಿರುವ ಮಾಸ್ತಿಯವರಂಥ ಅಪ್ಪಟ ಸಾಹಿತಿಗಳು ಕನ್ನಡದಲ್ಲಾಗಲಿ ಇಂಗ್ಲೀಷಿನಲ್ಲಾಗಲೀ ತೀರ ಅಪರೂಪ".

ಈ ಮೇಲಿನ ಮಾತುಗಳು ಮಾಸ್ತಿಯವರ ಕಥಾ ಜಗತ್ತಿನ ಬಗ್ಗೆ ಹೇಳಿರುವಂತಹುದು. ಅಂದರೆ ಮಾಸ್ತಿಯವರ ಕತೆಗಳಲ್ಲಿ ಏನೆಲ್ಲಾ ಅಡಗಿರುತ್ತದೆ ಎನ್ನುವುದನ್ನು ಅನಂತಮೂರ್ತಿಯವರು ತಮ್ಮ ಕೆಲವೇ ಮಾತುಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಆದರೆ ಪ್ರಾಯಕ್ಕೆ ಬರುವವರಿಗೆ ಮಾತ್ರ ಅಲ್ಲ, ಅಕ್ಷರ ಬಂದು ಅರ್ಥಮಾಡಿಕೊಳ್ಳುವ ಪ್ರತಿಯೊಬ್ಬರಿಗೂ ಮಾಸ್ತಿಯವರ ಕತೆಗಳನ್ನು ಕೊಡಬಹುದು ಅನ್ನಿಸುತ್ತದೆ.

ಶ್ರೀನಿವಾಸರು ಸಣ್ಣ ಕತೆಗಳನ್ನು ಬರೆಯುವ ತಮ್ಮ ಉದ್ದೇಶವನ್ನು ಈ ರೀತಿ ಸ್ಪಷ್ಟಪಡಿಸುತ್ತಾರೆ.

> "ನನ್ನ ಕತೆಗಳನ್ನು ಬರೆಯುವಲ್ಲಿ ನನ್ನ ಉದ್ದೇಶ ಒಂದೇ ಒಂದು. ಎಂದು ನಾನು ಹಲವು ಸಂದರ್ಭದಲ್ಲಿ ಸೂಚಿಸಿದ್ದೇನೆ. ಆ ಉದ್ದೇಶ, ಜೀವನ ನನಗೆ ನೀಡಿರುವ ದರ್ಶನವನ್ನು ವಿವರಿಸುವ ಚಿತ್ರಗಳನ್ನು ಕೊಡುವುದು. ಇಂದಿನ, ಹಿಂದಿನ, ನಮ್ಮ ನಾಡಿನ, ನಮ್ಮ ರಾಷ್ಟ್ರದ,

ಬೇರೆ ಹತ್ತು ರಾಷ್ಟ್ರಗಳ, ಬಹುತೆರನ ಜೀವನ ಚಿತ್ರಗಳು ನನ್ನ ಕಥೆಗಳಲ್ಲಿ ಕಾಣುತ್ತವೆ. ಇವು ಸತ್ಯವನ್ನು ಬಿಂಬಿಸಿವೆ. ಸ್ಫುಟವಾಗಿವೆ, ಇಷ್ಟೊ ಅಷ್ಟೊ ರಸಾನುಭವವನ್ನು ನೀಡುತ್ತವೆ, ಎಂದು ಓದುವವರಿಗೆ ಕಂಡರೆ ನನ್ನ ಕೆಲಸ ಸಾರ್ಥಕ ಆಯಿತು. ಇದರ ಆಚೆಗೆ ಇವನ್ನು ಓದುವವರು ಇವುಗಳಲ್ಲಿ ಜೀವನವನ್ನು ಕುರಿತು ಇಂಥ ಅಂಥ ನೀತಿ ಮುಂತಾದುವನ್ನು ನಿರೂಪಿಸುವ ಉದ್ದೇಶ ಇದೆ ಎಂದು ಭಾವಿಸಬಹುದು. ದಿಟವಾದ ಜೀವನದಿಂದ ಒಂದು ಭಾವ ತೋರುವಂತೆ ಜೀವನದ ದಿಟವಾದ ಒಂದು ಚಿತ್ರದಿಂದ ಒಂದು ಭಾವ ತೋರುವುದು ಸಹಜ. ಅದರಿಂದ ಓದುವವರಿಗೆ ಪ್ರಂಯೋಜನ, ಸಂತೋಷ ಆಗುವುದಾದರೆ ನಾನು ಅದನ್ನು ಒಪ್ಪಕೊಳ್ಳುತ್ತೇನೆ....(ಮುನ್ನುಡಿ – 'ಸಣ್ಣ ಕತೆಗಳು ೧ಳ')

ಮಾಸ್ತಿಯವರ ಈ ಮಾತುಗಳು ಸಣ್ಣಕತೆಗಳಷ್ಟೇ ಅಲ್ಲ. ಅವರ ಇತರೆ ಸಾಹಿತ್ಯ ಕೃತಿಗಳನ್ನೂ ಸೇರಿಸಿ ಹೇಳಿದಂತೆ ತೋರುತ್ತದೆ. ಆದರೆ ಮೇಲಿನ ಮಾತುಗಳು ಬಂದಿರುವುದು ಸಣ್ಣಕತೆಗಳನ್ನು ಕುರಿತೇ ಎಂಬುದನ್ನು ಓದುಗರು ಮರೆಯಬಾರದು. ಕತೆಗಳ ಇಡೀ ಉದ್ದೇಶವನ್ನು ಮಾಸ್ತಿಯವರು ಈ ಚಿಕ್ಕ ಮುನ್ನುಡಿಯ ಸಹಾಯದಿಂದಲೇ ಸ್ಪಷ್ಟೀಕರಿಸಿದ್ದಾರೆ. ಮನುಷ್ಯ ಲೋಕವನ್ನು ಕುರಿತ ಪರಿಪಕ್ವವಾದ ಜೀವನ ದರ್ಶನವನ್ನು ಅವರ ಕತೆಗಳು ಬಹುತೇಕ ಪ್ರಕಟಿಸುತ್ತವೆ. ಮೇಲೆ ಉದ್ಧರಿಸಲಾಗಿರುವ ಸಾಲುಗಳು ಅವರ ಸ್ವಭಾವಸಹಜ ವಿನಯದ ಮಾತುಗಳೇ ಆಗಿವೆ. ಬದುಕಿನಲ್ಲಿ ತಾವು ಕಂಡುಕೊಂಡ ಅನುಭವಗಳನ್ನು ಹಂಚಿಕೊಳ್ಳುವ ಕಾರ್ಯದಲ್ಲಿ 'ನಾನು ನಿಮಿತ್ತ ಮಾತ್ರ' ಎಂದೂ ಅವು ಸೂಚಿಸುವಂತಿವೆ.

ಅಧ್ಯಾಯ : ಮೂರು

# ಗಂಡನ ಕ್ರೂರತನಕ್ಕೆ ಒಳಗಾದ 'ಸ್ತ್ರೀ' ಪಾತ್ರಗಳು

- ದುರದೃಷ್ಟದ ಹೆಣ್ಣು
- ಮುನೀಶ್ವರ ಮರ
- ಚೆನ್ನಮ್ಮ
- ಚಿಕ್ಕವ್ವ
- ಅರ್ವಾಚೀನ ಆಂಗ್ಲ ಶಕುಂತಲ
- ಬೇಬಿಲಾನ್ ಕುಮಾರಿ

## ಗಂಡನ ಕ್ರೂರತನಕ್ಕೆ ಒಳಗಾದ ಸ್ತ್ರೀ ಪಾತ್ರಗಳು

'ಹೆಣ್ಣು' ಮಾಸ್ತಿಯವರ ಬಹುತೇಕ ಕತೆಗಳಲ್ಲಿ ಪ್ರಧಾನ ವಸ್ತು. ಅವರ ಅನೇಕ ಕತೆಗಳಲ್ಲಿ ಹೆಣ್ಣಿನ ಕಷ್ಟ ಸಹಿಷ್ಣುತೆ, ಸೈರಣೆ, ತಾಳ್ಮೆಗಳನ್ನು ನೋಡಬಹುದು. ಹೆಣ್ಣಿನ ಅಸಹಾಯಕತೆ, ಬವಣೆ, ದುಃಖ-ದುಮ್ಮಾನಗಳಿಗೆ ಮಾಸ್ತಿಯವರ ಹೃದಯ ಯಾವತ್ತೂ ಸ್ಪಂದಿಸಿದೆ. ವಿವಿಧ ಮನೋಧರ್ಮದ ನೂರಾರು ಮಹಿಳಾ ಪಾತ್ರಗಳನ್ನು ಮಾಸ್ತಿ ತಮ್ಮ ಕತೆಗಳಲ್ಲಿ ವಿಶೇಷವಾಗಿ ಚಿತ್ರಿಸಿದ್ದಾರೆ. ಹೀಗಾಗಿ ಹೆಣ್ಣಿನ ಪಾತ್ರ ಚಿತ್ರಣ ಮಾಸ್ತಿಯವರ ಕಥಾ ಸಹಿತ್ಯದಲ್ಲಿ ಯಾವತ್ತೂ ಏಕಮುಖವಾಗಿಲ್ಲ. ಎಲ್ಲ ಬಗೆಯ ಸರಳೀಕರಣ, ಆದರ್ಶೀಕರಣಗಳನ್ನು ಬದಿಗೊತ್ತಿ ಮಾಸ್ತಿ 'ಸ್ತ್ರೀ' ಯನ್ನು ಜೀವಂತ ಪಾತ್ರಗಳಾಗಿ ಚಿತ್ರಿಸಿದ್ದಾರೆ. ಹೀಗಾಗಿ 'ಸ್ತ್ರೀ' ಮಾಸ್ತಿ ಕತೆಗಳಲ್ಲಿ ಪ್ರತಿಮೆ, ಸಂಕೇತಗಳಲ್ಲಿ ಕಳೆದು ಹೋಗದೆ ರಕ್ತ ಮಾಂಸಗಳಿಂದ ತುಂಬಿದ ಮನುಷ್ಯರಂತೆ ಕಾಣುತ್ತಾರೆ. ಇವರಲ್ಲಿ ಮುಗ್ಧರು, ಪ್ರಬುದ್ಧರು, ಒಳ್ಳೆಯವರು, ದುಷ್ಟರು, ಹೀಗೆ ನಾನಾ ತರನಾದ ಪಾತ್ರಗಳು ಅವರ ಕತೆಗಳಲ್ಲಿ ಬಂದು ಸೇರುತ್ತಾರೆ. ಆ ನಿಟ್ಟಿನಲ್ಲಿ ಗಂಡನ ಕ್ರೂರತನಕ್ಕೋ ಅಥವಾ ದುಷ್ಟತನಕ್ಕೋ ಒಳಗಾದ 'ಹೆಣ್ಣು' ತನ್ನ ಜೀವಿತಾವದಿಯಲ್ಲಿ ಏನೆಲ್ಲಾ ಕಷ್ಟಗಳನ್ನು ಸಹಿಸಬಲ್ಲಳು ಎಂಬುದಕ್ಕೆ ಮಾಸ್ತಿಯವರ ಅನೇಕ ಕತೆಗಳು ನಿದರ್ಶನವಾಗಿವೆ. ಅಂತಹ ಕೆಲವು ಕತೆಗಳನ್ನು ಇಲ್ಲಿ ಚರ್ಚೆಗೆ ತೆಗೆದುಕೊಳ್ಳಬಹುದು.

### ➢ ದುರದೃಷ್ಟದ ಹೆಣ್ಣು

'ದುರದೃಷ್ಟದ ಹೆಣ್ಣು' ಕತೆಯಲ್ಲಿ ನಪುಂಸಕನೊಬ್ಬ ಮುಗ್ಧ ಹುಡುಗಿಯನ್ನು ಮದುವೆಯಾಗಿ, ಆವಳನ್ನು ಇತರೆ ಗಂಡಸರಿಗೆ ಒಡ್ಡಿ, ತನ್ನ ಜೀವನ ಸಾಗಿಸಲು ಪ್ರಯತ್ನಿಸುತ್ತಾನೆ. ಈ ಕತೆಯಲ್ಲಿ ಬರುವ ಮಗ್ಧ ಹುಡುಗಿಗೆ ನಾಲ್ಕು ತಂಗಿಯರು ಇದ್ದಾರೆ. ಇಂತಹ ಒಂದು ಸಂದರ್ಭದಲ್ಲಿ ತಂದೆಯಾದವನು ತನ್ನ ಹಿರಿಮಗಳ ಮದುವೆಯ ಸಂದರ್ಭದಲ್ಲಿ ಗಂಡಿನ ಪೂರ್ವಾಪರ ವಿಚಾರಿಸದೆ ಮದುವೆಗೆ ಸಿದ್ದತೆ ನಡೆಸಿಬಿಡುತ್ತಾನೆ. ಮದುವೆಯಾದ ಆ ನಪುಂಸಕ ಗಂಡ ತನ್ನ ಹೆಂಡತಿಯನ್ನು ಹಳ್ಳಿಯಿಂದ ಬೆಂಗಳೂರಿಗೆ ಕರೆತರುತ್ತಾನೆ. ಒಂದು ಬಾಡಿಗೆ ಮನೆಯನ್ನೂ ಸಹ ಮಾಡುತ್ತಾನೆ. "ತರುಣಿ ಬಹಳ ಬಲ್ಲಿದವಳೇನಲ್ಲ; ಆದರೆ ಗಂಡಹೆಂಡಿರ ಸಂಬಂಧ ಏನೆಂದು ಬಲ್ಲಳು". (ಸಣ್ಣಕತೆಗಳು, ಸಂ. ೫. ಪು.ಸ. ೨೭) ಇಂತಹ ಮುಗ್ಧ ಹುಡುಗಿ ಗಂಡನಾದ ನಪುಂಸಕನ ಕ್ರೂರತನಕ್ಕೆ ಸಿಲುಕಿ ಇಡೀ ಜೀವನವೇ ದುರಂತಮಯವಾಗಿಬಿಡುತ್ತದೆ. ಹಿಂದು- ಮುಂದು ನೋಡದೆ ತನ್ನ ಮದುವೆ ಮಾಡಿದಂತ ತಂದೆ ತಾಯಿಯನ್ನು ನೆನೆಯುತ್ತಾಳೆ. ಆದರೆ ಆ ವೇಳೆಗಾಗಲೇ ಪರಿಸ್ಥಿತಿ ಕೈ ಮೀರಿ ಹೋಗಿದೆ. ಏನನ್ನೂ ಚಿಂತನೆ ಮಾಡಲಾರದ ಸಂದರ್ಭದಲ್ಲಿ

ತರುಣಿ ತನ್ನ ಗಂಡ ಕರೆತರುವ ಅನ್ಯ ಪುರುಷರೊಂದಿಗೆ ದೈಹಿಕ ಸಂಬಧ ಬೆಳೆಸಲು ಒಪ್ಪುತ್ತಾಳೆ. ಅಂದರೆ ಅವಳಿಗೆ ಇಷ್ಟವಾದ ಗಂಡಸಿನೊಂದಿಗೆ ಮಾತ್ರ ದೇಹ ಸಂಬಂಧ ಮಾಡಲು ಅವಳು ಮೊದಲೇ ತನ್ನ ಗಂಡನಿಗೆ ಹೇಳಿರುತ್ತಾಳೆ. ಈ ರೀತಿಯ ದುರಂತ ಜೀವನ ಒಂದು ಹಳ್ಳಿಯ ಮುಗ್ಧ ಹುಡುಗಿಗೆ ಕಾದಿರುತ್ತದೆ.

ತನ್ನ ಜೀವಿತಾವಧಿಯಲ್ಲಿ ಏನೆಲ್ಲಾ ಸುಖ-ಸಂತೋಷಗಳನ್ನು ಪಡೆಯಬೇಕೆಂದಿದ್ದಳೋ, ಅವೆಲ್ಲಾ ತನ್ನ ಗಂಡನ ಮೂಲಕವೆ ನೀರು ಪಾಲಾಗುತ್ತದೆ. ಆದರೂ ದೃತಿಗೆಡದೆ ಜೀವನ ಸಾಗಿಸಬೇಕಾದರೆ, ಅನಿರೀಕ್ಷಿತವಾಗಿ ಆ ತರುಣಿಯ ದೇಹ ಸಂಬಂಧವನ್ನು ಅನುಭವಿಸುತ್ತಿದ್ದ ತರುಣ ಅವಳನ್ನು ಮರುವಿವಾಹವಾಗಲು ಒಪ್ಪಿತ್ತಾನೆ. ಆದರೆ ಆ ಆಸೆ ಈಡೇರದೆ ಗಂಡನ ಕೊಲೆಯೊಂದಿಗೆ ಕತೆ ದುರಂತದೊಂದಿಗೆ ಮುಕ್ತಾಯವಾಗುತ್ತದೆ. ಏನೂ ಅರಿಯದ ಒಬ್ಬ ಮುಗ್ಧ ಹುಡುಗಿ ದುಷ್ಟ ಗಂಡನ ಸಾವಿನೊಂದಿಗೆ ತನ್ನೆಲ್ಲ ಆಸೆಗಳನ್ನು ಕೈಚೆಲ್ಲುತ್ತಾಳೆ. ಈ ರೀತಿಯ ಒಂದು ದುರಂತ ಕತೆಯನ್ನು ಮಾಸ್ತಿಯವರು ಒಬ್ಬ ಪೋಲೀಸ್ ಅಧಿಕಾರಿಯ ಮುಖಾಂತರ ಹೇಳಿಸುತ್ತಾರೆ. ಈ "ಕತೆಯಲ್ಲಿ ಗಂಡ ನಪುಂಸಕನಾಗಿರುವುದರಿಂದ ಹೆಣ್ಣು ವೇಶ್ಯೆಯಾಗುತ್ತಾಳೆ. ಆಕೆ ವೇಶ್ಯೆಯಾಗುವುದಕ್ಕೆ ಆಕೆಯ ಸ್ಥಿತಿ ಮತ್ತು ಗಂಡನ ಬಲತ್ಕಾರ ಎರಡೂ ಕಾರಣವಾಗುತ್ತವೆ. ಗಂಡನ ಕೊಲೆಯಾದರೂ ಮಾಸ್ತಿಯವರ ಸಹಾನುಭೂತಿ ಹೆಂಡತಿಯತ್ತಲೇ" (ಟಿ,ಪಿ ಅಶೋಕ: ಪುಸ್ತಕ ಪ್ರೀತಿ. ೧೯೯೨ ಪು.ಸಂ.೧೬೦)

"ದುರದೃಷ್ಟದ ಹೆಣ್ಣು" ಕತೆಯ ಶೀರ್ಷಿಕೆಯೆ ಆ ಹೆಣ್ಣಿನ ನಿಲುವನ್ನು ಸೂಚಿಸುತ್ತಿದೆ. ಕತೆ ಪೂರ್ವನಿಯೋಜಿತ ಎಂದು ಅನ್ನಿಸದಂತೆ ಸಹಾನುಭೂತಿಯ ಬೆಳಕಿನಲ್ಲಿ ಹೊಸ ತಿರುವು ಪಡೆಯುತ್ತದಾದರೂ, ಕತೆಯ ಕೊನೆಯಲ್ಲಿ -ಬರುವ " ಸೆರೆಯಿಂದ ಬಂದ ಇವನು ಆ ಹುಡುಗಿಯನ್ನು ಮದುವೆಯಾದನೆ ನನಗೆ ತಿಳಿಯದು. ಆಗಿರಬಹುದು" (ಸಣ್ಣ ಕತೆಗಳು; ಸಂ. ೫ ಪು.ಸಂ. ४೨) ಎನ್ನುವ ಮೂಲಕ ಕತೆ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಮುಕ್ತಾಯಗೊಳ್ಳುತ್ತದೆ.

➢ **ಮುನೀಶ್ವರನ ಮರ**

"ಮುನೀಶ್ವರನ ಮರ" ಎಂಬುದು ರಾಮಯ್ಯ ರಾಜಮ್ಮ ಎಂಬುವರ ದಾಂಪತ್ಯ ಜೀವನದ ಶೋಕವನ್ನು ಚಿತ್ರಿಸುವ ಕತೆ. ಈ ಕತೆಯಲ್ಲಿ ಬರುವ ರಾಮಯ್ಯ ಮೂಲತಃ ಒಳ್ಳೆಯ ವ್ಯಕ್ತಿತ್ವವುಳ್ಳವನೆ. ಆದರೆ ಜನರಾಡುವ ಬಾಯಿ ಮಾತುಗಳನ್ನು ಕೇಳಿ ದಿನೇ ದಿನೇ ತನ್ನ ಹೆಂಡತಿಯನ್ನು ಅನುಮಾನಿಸುತ್ತಾನೆ. ಈ ಅನುಮಾನವೇ ಕತೆಯ ದುರಂತಕ್ಕೆ ಕಾರಣವಾಗುತ್ತದೆ. ಚೆಲುವೆ ಹೆಣ್ಣೊಬ್ಬಳು (ರಾಜಮ್ಮ) ಜನದ ಅಪವಾದದಿಂದಾಗಿ ಗಂಡನಿಂದ ತ್ಯಜಿತಳಾಗಿ, ಪಡಬಾರದ ಪಾಡನ್ನು ಪಡುತ್ತಾಳೆ. ಈ ಕತೆಯಲ್ಲಿ ಬರುವ ಮತ್ತೊಬ್ಬ ವ್ಯಕ್ತಿ

ನರಸಪ್ಪನೂ ಸಹ ಪರೋಕ್ಷವಾಗಿ 'ರಾಜಮ್ಮ'ನ ದುರಂತಸಾವಿಗೆ ಕಾರಣನಾಗುತ್ತಾನೆ.

ಜನರಾಡುವ ಬೇಜವಾಬ್ದಾರಿಯುತ ಮಾತುಗಳನ್ನೇ ನಿಜವೆಂದು ನಂಬಿ ತನ್ನ ಹೆಂಡತಿಯಾದ ರಾಜಮ್ಮನನ್ನು ರಾಮಯ್ಯ ತೊರೆಯುತ್ತಾನೆ. ಹಲವಾರು ವರ್ಷಗಳ ನಂತರ ರಾಮಯ್ಯ ಸನ್ಯಾಸಿಯಾಗಿ ಅದೇ ಊರಿನಲ್ಲಿ ಮತ್ತೆ ಕಾಣಿಸಿಕೊಳ್ಳುತ್ತಾನೆ. ಸನ್ಯಾಸಿಯಾಗಿ ಬಂದು ನೆಲೆಸಿದ ಮರವೇ 'ಮುನೀಶ್ವರ ಮರ'ವಾಗುತ್ತದೆ. ಊರಿನ ಯಾವೊಬ್ಬನೂ ರಾಮಯ್ಯನನನ್ನು ಗುರುತು ಹಿಡಿಯುವುದಿಲ್ಲ. ಆದರೆ ರಾಜಮ್ಮ ಅವನನ್ನು ಗುರುತಿಸುತ್ತಾಳೆ. ತನ್ನನ್ನು ಉದ್ಧಾರ ಮಾಡು ಎಂದು ಪರಿಪರಿಯಾಗಿ ಬೇಡುತ್ತಾಳೆ. ಆದರೆ ಸನ್ಯಾಸಿಯಾಗಿದ್ದ ರಾಮಯ್ಯ ದೊಡ್ಡಮನುಷ್ಯನ ಹಾಗೆ ದೊಡ್ಡಮಾತುಗಳನ್ನೇ ಮಾತನಾಡುತ್ತಾನೆ. ಕೊನೆಗೆ ರಾಜಮ್ಮನ ಅಂತರಾಳದ ನೋವಿಗೆ ಸ್ಪಂದಿಸಲಾರದೆ ಊರನ್ನೇ ಬಿಟ್ಟು ಪರಾರಿಯಾಗುತ್ತಾನೆ. ಇಂತಹ ಸಂದರ್ಭದಲ್ಲಿ ರಾಜಮ್ಮನ ಮಾತುಗಳು ಹೃದಯಸ್ಪರ್ಶಿಸುತ್ತವೆ. ಕತೆಯಲ್ಲಿ ಬರುವ ಅವಳ ಮಾತುಗಳನ್ನೇ ಗಮನಿಸಬಹುದು..........

> "ಯಾರೂ ಅಲ್ಲಪ್ಪ ಅಪರಾಧಮಾಡಿದ್ದು, ನಾನೇ ಮಾಡಿದೆ. ಆವತ್ತು ಹೆಂಡತಿಯಾಗಿದ್ದೆ; ಸರಿಯಾಗಿ ನಡಕೊಳ್ಳಲಿಲ್ಲ; ಊರಿಂದ ತೊಲಗಿಸಿದೆ. ಈಗ ಸಂನ್ಯಾಸಿಯಾಗಿ ಬಂದರು; ಬಾಳು ಕೆಟ್ಟ ಹೆಂಗಸು ಇರಲಾರದೆ ಕಾಲು ಮುಟ್ಟಿದೆ; ಕಾಡಿನಿಂದಲೂ ಓಡಿಸಿದೆ. ನನ್ನದಪ್ಪಾ ಅಪರಾಧ, ನನ್ನದು ಅಪರಾಧ". ಎಂದು ತಲೆ ತಲೆ ಚಚ್ಚಿಕೊಂಡಳು. "ಅಯ್ಯೋ ನನ್ನ ದೇವರೇ, ಯಾಕೆ ನನ್ನ ಹೀಗೆ ಪರೀಕ್ಷೆ ಮಾಡತೀ? ಆಗ ಪರೀಕ್ಷೆಮಾಡಿದೆ, ನಾಕೆಟ್ಟ, ತಿರಗೀ ಪರಿಕ್ಷೆ ಮಾಡತೀಯಲ್ಲಾ; ನಾ ಏನು ಮಾಡಲಿ?" ಹೀಗೆ ಕೂಗುತ್ತ ಅವಳು ಮಂಟಪದ ಬಳಿಗೆ ಓಡಿದಳು. ಸನ್ಯಾಸಿ ವಾಡಿಕೆಯಾಗಿ ಕುಳಿತಿರುತ್ತಿದ್ದ ಸ್ಥಳಕ್ಕೆ ಮಂಡಿ ಊರಿ ನಮಸ್ಕಾರ ಮಾಡಿದಳು. "ನನ್ನ ಕೈ ಬಿಡಬೇಡ, ಕಾಪಾಡು, ನನ್ನದು ತಪ್ಪಾಗಿದೆ; ಅದನ್ನು ಮನ್ನಿಸು. ನಾ ಕೆಟ್ಟದ್ದು ನಿಜ; ಅದಕ್ಕಾಗಿ ನನ್ನ ತೊರೀಬೇಡ. ನನ್ನ ದೇವರು, ನನ್ನ ಕೈ ಬಿಡಬೇಡ. ಸೆರಗೊಡ್ಡಿ ಬೇಡತೇನೆ, ನನ್ನ ಕಾಪಾಡು", ಎಂದು ಕೂಗಿದಳು; ಶೂನ್ಯಕ್ಕೆ ಸೆರಗನ್ನೊಡ್ಡಿದಳು".[1]

ಗಂಡ ತನ್ನನ್ನು ತೊರೆದು ಹೋದಾಗ ರಾಜಮ್ಮ ದುಃಖ ಪಟ್ಟಳು ನಿಜ. ಆದರೆ ಮತ್ತೊಮ್ಮೆ ಅದೇ ಗಂಡ ಸನ್ಯಾಸಿಯಾಗಿ, ಮತ್ತೆ ಆ ಊರಿಗೆ ಬಂದು ನೆಲಸಿ, ಮತ್ತೆ ಊರನ್ನು ತೊರೆದಾಗ ರಾಜಮ್ಮ ಮತಿಭ್ರಮಣೆಯಾಗಿ ಹುಚ್ಚಿಯಾದಳು. ಈ ಕತೆ ಹಂತಹಂತವಾಗಿ ಬೆಳೆದು ಗಂಡನ ಸನ್ಯಾಸಕ್ಕೂ ಹೆಂಡತಿಯ ದುರ್ಮರಣಕ್ಕೂ ಕಾರಣವಾಯಿತು. ನಿಷ್ಕಾರಣ ನಿಂದೆಯನ್ನು ಕೇಳಿದಾಗ ರಾಜಮ್ಮನ ಹೃದಯದಲ್ಲಿ ಮೂಡುವ ಯಾತನೆ, ಮುನಿಯಾಗಿ ಪತಿ ಮರಳಿ ಬಂದಾಗ ಅವಳಲ್ಲಿ ಮೂಡುವ ಹೊಸ ಆಸೆ,

1. ಮಾ.ವೆಂ. ಅಯ್ಯಂಗಾರ್, ಸಣ್ಣಕತೆಗಳು; ಸಂಪುಟ –೪ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು–೧೯೯೦) ಪು.ಸಂ.೧೬

ಆತ ಮತ್ತೆ ನಿಷ್ಕರುಣವಾಗಿ ತೊರೆದು ಹೋದಾಗ ಬಾಳಿನ ಎಲ್ಲಾ ಆಶಾ ತಂತುಗಳು ಕತ್ತರಿಸಿ ಹೋಗಿ ಆಗುವ ಬುದ್ಧಿಭ್ರಮಣೆ, ಮಾರ್ಗಮಧ್ಯದಲ್ಲಿನ ಅವಳ ದಾರುಣ ಸಾವು ಹಂತ ಹಂತವಾಗಿ ಕ್ರಮಾನುಗತವಾಗಿ ಕರುಣೆಯ ಪ್ರವಾಹವನ್ನು ಉಕ್ಕಿಸುತ್ತಾ ಹೋಗಿ ಉದ್ದಿಷ್ಟ ಪರಿಣಾಮವನ್ನು ಮುಟ್ಟಿ ಮನಸ್ಸನ್ನು ಮರುಕದ ಹೊಳೆಯಲ್ಲಿ ತೇಲಿಸಿಬಿಡುತ್ತದೆ.

➢ **ಚೆನ್ನಮ್ಮ**

ಇದು ಒಬ್ಬ ಹೆಣ್ಣು ಮಗಳ ಶೋಕ ಪೂರ್ಣ ಬಾಳುವೆಯ ಕಥೆ. "ಚೆನ್ನಮ್ಮ" ಎಂಬ ಕಥೆಯಲ್ಲಿ ಹಳ್ಳಿ ಜೀವನಕ್ಕೂ, ನಗರ ಜೀವನಕ್ಕೂ ನಡುವಿನ ವ್ಯತ್ಯಾಸಗಳನ್ನು ಮಾಸ್ತಿಯವರು ಅನೇಕ ಸ್ತರಗಳಲ್ಲಿ ಗುರುತಿಸುತ್ತಾ ಹೋಗುತ್ತಾರೆ. ರಾಮಪ್ಪ ನಗರ ಜೀವನದ ಮೋಜಿಗೆ ಮರುಳಾದವನು. ಹಳ್ಳಿಯಲ್ಲಿದ್ದ ಸ್ವಂತ ಜಮೀನಿನಲ್ಲಿ ದುಡಿಯುವುದು ಅವನಿಗೆ ಅವಮಾನಕರ. ಆದರೆ ಪೇಟೆಯ ಗಿರಣಿಯಲ್ಲಿ ಕೂಲಿಯಾಗಿ ದುಡಿಯುವುದು ಅವನಿಗೆ ಪ್ರತಿಷ್ಠೆ. ಇಂತಹ ಮನೋಭಿಲಾಶೆಯನ್ನು ಇಟ್ಟುಕೊಂಡಿದ್ದ ರಾಮಪ್ಪ ತನ್ನ ಮಗುವಿನೊಂದಿಗೆ ಹೆಂಡತಿ ಚೆನ್ನಮ್ಮನನ್ನೂ ಬೆಂಗಳೂರು ನಗರಕ್ಕೆ ಕರೆತರುತ್ತಾನೆ. "ಚೆನ್ನಮ್ಮನಿಗೂ ಬೆಂಗಳೂರು ಬೇಕಾಗಿರಲಿಲ್ಲ. ಆದರೆ ಗಂಡ ಅಪೇಕ್ಷಿಸಿದರೆ ಇವಳು ಏನು ಮಾಡುವುದು? ಮಗುವನ್ನು ಕರೆದುಕೊಂಡು ಹೊರಟಿದ್ದಳು". (ಮಾ.ವೆಂ. ಅಯ್ಯಂಗಾರ್, ಸಣ್ಣಕತೆಗಳು, ೨೨)

ಚೆನ್ನಮ್ಮ ಗಂಡನ ಒತ್ತಾಯಕ್ಕೆ ಮಣಿದು ಬೆಂಗಳೂರಿಗೆ ತೆರಳುತ್ತಾಳೆ. ಅಲ್ಲಿನ ಜೀವನ ಕಂಡು ಮರುಗುತ್ತಾಳೆ. ಆದರೆ ಗಂಡನಿಗೆ ಅದೇ ಇಷ್ಟವಾದ್ದರಿಂದ ಸಹಿಸಿಕೊಳ್ಳುತ್ತಾಳೆ. ನಂತರ ಗಂಡ ರಾಮಪ್ಪನ ಇಷ್ಟದ ಮೇರೆಗೆ ಗಿರಣಿಯಲ್ಲಿ ಕೂಲಿ ಕೆಲಸ ಮಾಡಲು ಸಹ ಒಪ್ಪುತ್ತಾಳೆ. ಅವಳಿಗೆ ಹಳ್ಳಿಯಲ್ಲಿ ರಾಗಿ ಗಂಜಿ ಉಂಡರೂ ಪರವಾಗಿಲ್ಲ, ನಗರದ ಐಷಾರಾಮಿ ಜೀವನ ಬೇಕಿಲ್ಲ ಅನ್ನೋದು ಗೊತ್ತಿದೆ. ಆದರೆ ಗಂಡ ಅವಳನ್ನು ಸಂಪೂರ್ಣವಾಗಿ ಮೋಸ ಮಾಡುತ್ತಾನೆ. ಅವನು ಒಬ್ಬ ಕುಡುಕ 'ಲೇಡಿ ಇಟ್ಟವನು; ಹಣವನ್ನು ದುರುಪಯೋಗಪಡಿಸಿಕೊಂಡವನು. ಏನೂ ಅರಿಯದ ಹೆಂಡತಿಯ ಕೈಯಲ್ಲಿ ಸುಳ್ಳು ಕಾಗದಕ್ಕೆ ಹೆಬ್ಬೆಟ್ಟು ಒತ್ತಿಸಿ ಅವಳಿಗೆ ಜೈಲು ವಾಸವನ್ನು ತಂದವನು. ಗಿರಣಿಯ ಮೇಸ್ತ್ರಿ ತನ್ನ [redacted] ಹೆಂಡತಿಯನ್ನೇ ಕೆಡಿಸುವ ಪ್ರಯತ್ನ ಮಾಡಿದಾಗಲೂ ಅದನ್ನು ಮನಸ್ಸಿಗೆ ತಂದುಕೊಳ್ಳದೆ ಹೆಂಡತಿಗೇ 'ತಡೆದುಕೋ' ಎಂದು ಹೇಳಿದವನು. ಇಂತಹ ಕ್ರೂರ ಮೃಗದ ಜೊತೆ ಸಂಸಾರ ನಡೆಸಿದಂತಹವಳು ಚೆನ್ನಮ್ಮ.

> "ಚೆನ್ನಮ್ಮನ ಸೌಶೀಲ್ಯ, ಸೌಜನ್ಯ, ಸಂಯಮ ಕಷ್ಟ ಸಹಿಷ್ಣುತೆಗಳು ಅತ್ಯಂತ ನೈಜವಾಗಿ ಸಮರ್ಥವಾಗಿ ಕಥೆಯಲ್ಲಿ ಮೈದೋರಿವೆ. ಅವಳ ಮನಸ್ಸಿನ ಭಾವರಾಗಗಳ ಅಂತಃಸ್ಪಂದನಗಳನ್ನು ಲೇಖಕರು ಚಿತ್ರಿಸಿಲ್ಲವಾದರೂ ಅವಳ ಒಂದೆರಡು ನಡೆವಳಿಕೆಗಳಲ್ಲೇ ಆಕೆ ಎಂತಹ ಸುಸಂಸ್ಕೃತಿವಂತ

ಹೆಣ್ಣು ಎಂಬುದನ್ನು ಮನಗಾಣುತ್ತೇವೆ. ತಾಯ್ನೆಲದ ಅಪ್ಪುಗೆಗಾಗಿ ಅವಳು ಪಡುವ ಹಂಬಲ, ತನ್ನ ಮನೆತನದ ಮೇಲೆ ಬೇಸಾಯವೃತ್ತಿಯ ಮೇಲೆ ಅವಳಿಗಿರುವ ಅಭಿಮಾನ ಗೌರವಗಳು ಅಭಿನಂದನಾರ್ಹವಾಗಿವೆ".[2]

ಚೆನ್ನಮ್ಮ ತನ್ನ ಗಂಡನ ಅವಿವೇಕದಿಂದಲೇ ತನ್ನ ಬಾಳನ್ನು ಗೋಳಿನ ಕಥೆಯಾಗಿಸಿಕೊಂಡವಳು. ಹಳ್ಳಿಯ ನಿಷ್ಕಪಟ ವಾತಾವಣವನ್ನೂ, ಶ್ರಮಪೂರ್ಣ ದುಡಿಮೆಯ ಜೀವನವನ್ನೂ ತೊರೆದು, ಬೆಂಗಳೂರಿನ ಬಣ್ಣದ ವಿಷನಾಗರಿಕತೆಯ ದುಶ್ಚಟಗಳಿಗೆ ಬಲಿಯಾದ ರಾಮಪ್ಪ ತನ್ನನ್ನು ನಂಬಿದ್ದ ಮಡದಿಯನ್ನು ಅನರ್ಥ ಪರಂಪರೆಗಳಿಗೆ ಸಿಕ್ಕಿಸಿ ತಾನೂ ಆ ವಿಷದ ವರ್ತುಲದಲ್ಲಿ ಸಿಕ್ಕಿ ಸಾಯುತ್ತಾನೆ. ಇಷ್ಟೆಲ್ಲಾ ಆದ ಮೇಲೂ ಚೆನ್ನಮ್ಮ ಸೆರೆವಾಸದ ನಂತರ ತನ್ನ ಹಳ್ಳಿಯಕಡೆ ಮುಖಮಾಡುತ್ತಾಳೆ. ತನ್ನ ಗಂಡನ ಸಾವಿನ ಸುದ್ಧಿ ಬಂದಾಗಲು ಚೆನ್ನಮ್ಮ ಒಳ್ಳೆಯ ನಿರ್ಧಾರವನ್ನೇ ತೆಗೆದುಕೊಳ್ಳುತ್ತಾಳೆ. "ಕೋಪಾ ಅಲ್ಲವ್ವ, ಕೋಪಾ ಅಲ್ಲ. ಯಾರನ ಹೋಗಿ ನೋಡೋದು ಅಂತ ಜೀವಕ್ಕೆ ಬೇಜಾರ. ಮೊಕ ಅದೆ; ಮನಷಾ ಬೇರೆ ಆವೊತ್ತೆ ಹೋದ ನಿನ್ನಳಿಯ. ನನಿಗಿದೆಲ್ಲ ಆಗಿಬಿಟ್ಟಿತು. ಈ ತಾಳಿ ಒಂದಿಟ್ಟುಕೊಂಡು ಊರಿಗೆ ಹೋಗೋಣ ಅಂತಿದ್ದಿ. ಗಂಡನ್ನ ಬಿಟ್ಟು ತಾಳಿನೇನ್ ತಂದಿ ಅಂದ ಹನುಮಂತರಾಯ. ತಗೋವ್ವ, ಇದನೂ ಅದೇನಾರ ಮಾಡಿಬಿಡು". (ಮಾ.ವೆಂ. ಅಯ್ಯಂಗಾರ್, ಸಣ್ಣಕತೆಗಳು, ಸಂಪುಟ –೪.೬೧) ಇಲ್ಲಿ ಚೆನ್ನಮ್ಮನ ನೋವನ್ನೂ, ಅವಳ ಮನೋಸ್ಥೈರ್ಯವನ್ನೂ, ಬಂಡಾಯದ ನಿಲುವನ್ನೂ ಗಮನಿಸಬಹುದಾಗಿದೆ.

➢ <u>ಚಿಕ್ಕವ್ವ</u>

'ಚಿಕ್ಕವ್ವ' ಈ ಕತೆಯ ಶೀರ್ಷಿಕೆಯಲ್ಲಿಯೇ ಒಂದು ಅರ್ಥವಿದೆ. 'ಚಿಕ್ಕವ್ವ' ಎಂದರೆ ಚಿಕ್ಕ–ಅವ್ವ, ಒಂದು ತುಂಬಿದ ಸಂಸಾರದಲ್ಲಿ ಮುದುಕನ ಮಡದಿಯಾಗಿ, ವಯಸ್ಸಿಗೆ ಬಂದ ಮಗನ ತಾಯಾಗಿ ಪಾದಾರ್ಪಣೆ ಮಾಡಿದ ಚಿಕ್ಕವ್ವ ನವಸಂಸಾರದ ಜವಾಬ್ದಾರಿಯನ್ನು ನಿರ್ವಹಿಸಲು ಮುಂದಾದಂತಹವಳು. ತನ್ನ ಜೀವನದ ಎಷ್ಟೋ ಮಧುರ ಕನಸುಗಳನ್ನು ಬದಿಗೊತ್ತಿ, ಮುದುಕ ಗಂಡನ ಮೂರನೇ ಹೆಂಡತಿಯ ಚಿಕ್ಕ ಮಗನನ್ನು ಹೆತ್ತ ತಾಯಿಗಿಂತ ಮಿಗಿಲಾಗಿ ನೋಡಿಕೊಂಡವಳು. ಮುದುಕನೊಂದಿಗೆ ಕೂಡಿ ಮಗುವನ್ನು ಪಡೆಯುವುದಕ್ಕಿಂತ ಈಗಾಗಲೇ ಗತಿಸಿದ ಸವತಿಯ ಚಿಕ್ಕ ಮಗುವನ್ನೇ ತನ್ನ ಮಗುವೆಂದು ತಿಳಿದವಳು ಚಿಕ್ಕವ್ವ, ಮನೆಯ ಕೆಲಸಕಾರ್ಯಗಳ ನಿರ್ವಹಣೆಯನ್ನು ತುಂಬ ಶ್ರದ್ಧೆಯಿಂದ ದಕ್ಷತೆಯಿಂದ ನಿರ್ವಹಿಸಿದಳು. ಮುದುಕನೊಂದಿಗೆ ಹೊಸ ದಾಂಪತ್ಯ ಸುಖದ ಆಸೆಗೆ ಸಮಾಧಿ ಮಾಡಿದಳು. ಅವಳ ಪ್ರತಿರೋಧ ಯಾವ ರೀತಿಯದೆಂದರೆ, "ಹಸು ಮಗು ಅಲ್ಲದೆ ನನಗೇನು ದಿನ

---

2. ಡಾ॥ ಎಚ್.ಜೆ. ಲಕ್ಕಪ್ಪಗೌಡ; ಸಾಹಿತ್ಯ ಬಹುಮುಖಚಿಂತನೆ. (ಸಿ.ವಿ.ಜಿ. ಪಬ್ಲಿಕೇಶನ್ಸ್, ೨೦೦೩) ಪು.ಸಂ. ೨೮೯.

ಹೋಗಿರೋದು? ನಾನು ಪುಣ್ಯ ಮಾಡಿದ್ದರೆ ನಿಮ್ಮ ಮಗಳಾಗಿ ಹುಟ್ಟುತಾ ಇದ್ದೆ. ನಿಮ್ಮ ಮನೆಯಲ್ಲಿ ಮಗ ಇದ್ದಾನಲ್ಲ ಅವನ ತಂಗಿಯಾಗಿ ಇರ್ತಾ ಇದ್ದೆ. ಬೇರೆ ಮನೆ ಮಗ, ಕೈಹಿಡಿದು ಬಂದೆ. ತಿಳಿಯದವಳು ಅಂತ ಸಹಿಸಿಕೊಳ್ಳಿ". (ಮಾ.ವೆಂ. ಅಯ್ಯಂಗಾರ್, ಸಣ್ಣಕತೆಗಳು, ಸಂಪುಟ –೪ ಪ.ಸಂ.೭೧) ಎನ್ನುವ ಮೂಲಕ ಮುದುಕನ ಜೊತೆ ದೈಹಿಕ ಸಂಪರ್ಕವನ್ನು ತಿರಸ್ಕರಿಸುತ್ತಾಳೆ. ಆದರೆ ಅವಳ ದುರ್ದೈವ ಗಂಡನ ಹಿರಿಯ ಮಗನ ರೂಪದಲ್ಲಿ ಅವಳನ್ನು ಕಾಡಿತು. ವರಸೆ – ಸಂಬಂಧಗಳನ್ನು ನಿರ್ಲಕ್ಷಿಸಿ, ತನ್ನ ತಾಯ ರೂಪದಲ್ಲಿದ್ದ ಚಿಕ್ಕವ್ವನಲ್ಲಿ ಪ್ರಣಯ ಸುಖವನ್ನು ಸವಿಯಲು ಬರುವ ಹಿರಿಯ ಮಗನ ದುಷ್ಟತನ, ಅತ್ತ ಮುದಿಗಂಡನ ಚಾಪಲ್ಯ, ಇವೆಲ್ಲವೂ ಚಿಕ್ಕವ್ವನ ಮನಸ್ಸಿನ ಮೇಲೆ ಬಿರುಗಾಳಿಯನ್ನೇ ಬೀಸಿಬಿಡುತ್ತವೆ. ಮಗನ ರೂಪದ ಹಿರಿಯ ಮಗ ಪ್ರಣಯ ಸುಖವನ್ನು ಅನುಭವಿಸಲು ಮುಂದಾದಾಗ, ಗೊತ್ತಿದ್ದೂ ಆ ಮುದಿಗಂಡ ಸುಮ್ಮನಾಗುತ್ತಾನೆ. ಒಟ್ಟಾರೆಯಾಗಿ ಕ್ರೂರ ಗಂಡನ, ಹೀನಮಗನ ನಿತ್ಯ ಕೋಟಲೆಗಳಿಂದ ಮರ್ಯಾದೆಯಾಗಿ ಬಾಳುವುದು ಅಸಾಧ್ಯವೆಂದರಿತ ಆ ಸಾಧ್ವಿ ಕೊನೆಗೆ ಬಾವಿಯಲ್ಲಿ ಬಿದ್ದು ಮರಣವನ್ನಪ್ಪುತ್ತಾಳೆ. ಅವಳು ಗಂಡನ ಮನೆಯಲ್ಲಿ ಬದುಕಿದಷ್ಟು ದಿನ ತನ್ನ ಹೃದಯದಲ್ಲಿ ಅಗ್ನಿ ಪರ್ವತವನ್ನೇ ತುಂಬಿಕೊಂಡಿದ್ದರೂ, ಕಿರುಮಗನಿಗೆ ಪ್ರೀತಿಯ ಅಮೃತವನ್ನು ಸುರಿಸುವ ಪ್ರೇಮಮಯವಾದ ಆ ಹೃದಯ ನಮ್ಮ ಮನಸ್ಸನ್ನು ತಟ್ಟುತ್ತದೆ. 'ಚಿಕ್ಕವ್ವ' ಕಥೆಯಲ್ಲಿ ಆತ್ಮಹತ್ಯೆ ನೋವನ್ನು ಎದುರಿಸಲಾರದೆ ಇಟ್ಟ ಸೋಲಿನ ತಪ್ಪೊಪ್ಪಿಗೆಯಲ್ಲ; ಅದು ನಿರ್ದಿಷ್ಟ ಉದ್ದೇಶದಿಂದ ಇಟ್ಟ ಧೈರ್ಯದ ಹೆಜ್ಜೆ ಆಗಿದೆ; ಕೆಡುಕನ್ನು ಗೆಲ್ಲುವುದರಲ್ಲಿ ಕಥೆ ಮುಕ್ತಾಯವಾಗುತ್ತದೆ.

➤ **ಅರ್ವಾಚೀನ ಆಂಗ್ಲ ಶಕುಂತಲೆ.**

ಇದು ಪಾಶ್ಚಾತ್ಯ ಕತೆಯಾದರೂ ಮಾಸ್ತಿಯವರ ಸಾಂಪ್ರದಾಯಿಕ ದೃಷ್ಟಿಯನ್ನು ನೋಡಬಹುದು. ಜೆನ್ನಿ ಎಂಬ ತರುಣಿಯು ಲಿಯೋನೆಲ್ ಎಂಬ ತರುಣನನ್ನು ಪ್ರೀತಿಸುತ್ತಾಳೆ. ಅವನನ್ನು ವಿವಾಹವಾಗಬೇಕೆಂಬ ಬಯಕೆಯೂ ಅವಳಲ್ಲುಂಟು. ಆದರೆ ಲಿಯೋನೆಲ್ ಮದುವೆಯಾಗುವುದಾಗಿ ಬರವಸೆಯಿತ್ತು ಅವಳೊಂದಿಗೆ ದೈಹಿಕ ಸುಖವನ್ನು ಪಡೆಯುತ್ತಾನೆ. ಜೆನ್ನಿ ತಾಯಿಯಾಗುತ್ತಿರುವ ವಿಷಯವನ್ನು ಲಿಯೋನೆಲ್‌ಗೆ ಹಲವು ಬಾರಿ ತಿಳಿಸುತ್ತಳಾದರೂ, ಲಿಯೋನೆಲ್ ಉದ್ಯೋಗವಿಲ್ಲದೆ ವಿವಾಹ ಅಸಾಧ್ಯ ಎನ್ನುವ ಮಾತನ್ನು ಹೇಳುತ್ತಾನೆ.

ಜೆನ್ನಿ ಲಿಯೋನೆಲ್‌ನಲ್ಲಿ ಇಟ್ಟಿದ್ದ ನಂಬಿಕೆ ಸುಳ್ಳಾಗುತ್ತದೆ. ಅವಳು ಮಗುವಿಗೆ ಜನ್ಮವಿತ್ತ ನಂತರ ಮೂರು ತಿಂಗಳು ಲಿಯೋನೆಲ್‌ಗಾಗಿ ಕಾಯುತ್ತಾಳೆ. ಆದರೆ ಉದ್ಯೋಗಕ್ಕೆಂದು ಹೊರಟ ಅವನು ಬರದೇ ಇದ್ದಾಗ ಜೆನ್ನಿ ದಿಟ್ಟ ಹೆಜ್ಜೆಯನ್ನೇ ಇಡುತ್ತಾಳೆ. ಅವಳು ಲಿಯೋನೆಲ್‌ನ ತಂದೆ, ತಾಯಿ ಬಳಿ ಹೋಗಿ ತನಗಾದ ಮಗುವಿನ ವಿಚಾರನವನ್ನು

ವಿವರಿಸುತ್ತಾಳೆ. ವಿಲ್ಸನ್ ದಂಪತಿಗಳು ಮಗುವಿನ ಚಹರೆಯನ್ನು ನೋಡಿ ಇದು ಲಿಯೋನೆಲ್ ತರಹವೇ ಇದೆ ಎಂದು ಅದನ್ನು ಸಾಕಿ-ಸಲಹುವ ಭರವಸೆಯನ್ನು ಜೆನ್ನಿಗೆ ನೀಡುತ್ತಾರೆ. ಕಥೆ ಕೊನೆಗೆ ಸುಖಾಂತವನ್ನು ಪಡೆದರೂ ಕೆಲವು ವಿಚಾರಗಳು ಓದುಗನನ್ನು ಕಾಡುತ್ತವೆ. ಕತೆಯ ಕೊನೆಯಲ್ಲಿ ಬರುವ ಕಥಾ ನಿರೂಪಕನ ಮಾತುಗಳನ್ನೇ ಗಮನಿಸಿ.......

> "ಮಗುವಿನ ಮುಖ, ಹುಬ್ಬು, ತುಟಿ, ಗಲ್ಲ, ಬೆರಳು ತಮ್ಮ ಮಗನ ಮುಖ, ಗಲ್ಲ, ಬೆರಳಂತೆ ಇದ್ದದ್ದರಿಂದ ಈ ಅಜ್ಜ ಅಜ್ಜಿ ಮಗುವನ್ನು ಒಪ್ಪಿಕೊಂಡರು. ಹಾಗಿರಲಿಲ್ಲ. ಒಪ್ಪುತ್ತಿದ್ದರೇ? ಹೇಳುವಂತಿಲ್ಲ. ಮಗ ಎಲ್ಲ ವಿವರದಲ್ಲಿ ತಂದೆಯನ್ನು ಹೋಲಿದ್ದಾನೆ ಎನ್ನುವ ಮಾತನ್ನು ನೋಡಿದಾಗ ನನಗೆ, ಭಾರತದ ನಮ್ಮ ಶಕುಂತಲೆಯ ಕತೆ ನೆನಪಿಗೆ ಬಂತು. ಶಕುಂತಲೆ ದುಷ್ಯಂತನಿಗೆ, "ಈ ಮಗುವನ್ನು ನೋಡು ಇದು ನಿನ್ನ ಮಗು ಎನ್ನುವುದು ಸ್ಪಷ್ಟ ಕಾಣುತ್ತದೆ. ಕೈ ಕಾಲು ಬೆರಳೆಲ್ಲ ನಿನ್ನ ಬೆರಳಂತೆಯೇ ಇವೆ", ಎಂದು ಕತೆ ಹೇಳುತ್ತದೆ. ಶಕುಂತಲೆಯ ಕಥೆಯಲ್ಲಿ ದುಷ್ಯಂತನ ಅಪ್ಪ ಇರಲಿಲ್ಲ. ದುರ್ದೈವ, ದುಷ್ಯಂತ ಮಾತ್ರ ಇದ್ದು, ಅವಳ ಮಾತನ್ನು ಒಪ್ಪಲಿಲ್ಲ. ಜೆನ್ನಿಯ ಸುದೈವ; ಇಲ್ಲಿ, ದುಷ್ಯಂತ ಇರಲಿಲ್ಲ, ಅವನ ಅಪ್ಪ ಇದ್ದ; ಮಗು ತನ್ನ ಮೊಮ್ಮಗ ಎಂದು ಒಪ್ಪಿಕೊಂಡ".[3]

ಇಲ್ಲಿ ವಿಲ್ಸನ್ ದಂಪತಿಗಳು ಮಗುವನ್ನು ಸೂಕ್ಷ್ಮವಾಗಿ ಗಮನಿಸಿ, ಅದು ಲಿಯೋನೆಲ್‌ನನ್ನು ಹೋಲುತ್ತಿದೆ ಎನ್ನುವುದನ್ನು ಖಚಿತಪಡಿಸಿಕೊಂಡ ಮೇಲೆ ಮಗುವನ್ನು ಸಾಕಿ-ಸಲುಹಲು ಒಪ್ಪಿಗೆ ನೀಡಿದರು. ಒಂದು ವೇಳೆ ಮಗು ಲಿಯೋನೆಲ್ ನನ್ನ ಹೋಲದೆ ಇದ್ದಿದ್ದರೆ ಆ ದಂಪತಿಗಳು ಒಪ್ಪುತ್ತಿರಲಿಲ್ಲ ಎನ್ನುವುದು ಸ್ಪಷ್ಟ. ಆಗ ಜೆನ್ನಿಯ ಸ್ಥಿತಿ ಏನು? ಇಷ್ಟಕ್ಕೂ ತಮ್ಮ ಮಗನೇ ಇಲ್ಲದಿರುವಾಗ ಜೆನ್ನಿ ತಂದ ಮಗುವನ್ನು ಆ ದಂಪತಿಗಳು ಮೊಮ್ಮಗ ಎಂದು ಸ್ವೀಕರಿಸದಿದ್ದರೆ, ಆ ಮಗುವಿನ ಪರಿಸ್ಥಿತಿ ಏನು? ಈ ರೀತಿಯ ಹಲವು ಪ್ರಶ್ನೆಗಳಿಗೆ ಕತೆ ದಾರಿ ಮಾಡಿ ಕೊಡುತ್ತದಾದರೂ, ಮಾಸ್ತಿಯವರು ಕೊನೆಗೆ ಕತೆಯನ್ನು ಸುಖಾಂತ ಗೊಳಿಸುವುದರೊಂದಿಗೆ ಈ ಎಲ್ಲಾ ಪ್ರಶ್ನೆಗಳಿಗೆ ಮೌನವಾಗಿಯೇ ಉತ್ತರಿಸಿ ಬಿಟ್ಟಿದ್ದಾರೆ. ಜೆನ್ನಿಗೆ ಅತ್ತೆ - ಮಾವಂದಿರಿಂದ ಜೀವನ ಸುಗಮವಾಯಿತೇ ವಿನಾ ತನ್ನನ್ನು ಪ್ರೇಮಿಸಿದ ಲಿಯೋನೆಲ್‌ನಿಂದಲ್ಲ ಎಂಬುದು ಈ ಕತೆಯಲ್ಲಿ ಸ್ಪಷ್ಟವಾಗುತ್ತದೆ.

➢ **ಬೇಬಿಲಾನ್ ಕುಮಾರಿ.**

ವಿದೇಶಿ ಹೆಣ್ಣು ಮಗಳ ಸಾಧ್ವಿಯ ಕಥೆಯೇ ಈ ಬೇಬಿಲಾನ್ ಕುಮಾರಿ. ಮಾಸ್ತಿಯವರಿಗೆ ಕೇವಲ ಭಾರತೀಯ ಹೆಣ್ಣು ಮಕ್ಕಳಲ್ಲಿ ಮಾತ್ರ ಗೌರವವಿತ್ತು ಎಂದರೆ ತಪ್ಪಾಗುತ್ತದೆ. ಅವರಿಗೆ ವಿದೇಶಿ ಹೆಣ್ಣು ಮಕ್ಕಳ ವಿಷಯದಲ್ಲೂ ಸಹನೆ ಹಾಗೂ

---

3. ಮಾ.ವೆಂ.ಅಯ್ಯಂಗಾರ್; ಸಣ್ಣಕತೆಗಳು, ಸಂಪುಟ ೫ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು) ಪು.ಸಂ. ೧೦೭

ಗೌರವಯುತವಾದ ಭಾವನೆ ಇತ್ತು ಎನ್ನುವುದಕ್ಕೆ ಈ 'ಬೇಬಿಲಾನ್ ಕುಮಾರಿ' ಕಥೆಯೇ ಸಾಕ್ಷಿಯಾಗುತ್ತದೆ. ವಿದೇಶಿ ಹೆಣ್ಣುಮಗಳಾದ ಆಮಾ ಸುಕ್ಬಲ್ ತನ್ನ ಹೆತ್ತ ತಂದೆ ತಾಯಿಯ ಕಷ್ಟವನ್ನು ಅರ್ಥಮಾಡಿಕೊಂಡು ಅವರ ನೋವಿಗೆ ಸ್ಪಂದಿಸುವ ಅವಳ ಹೃದಯಂಗಮ ಚಿತ್ರಣವನ್ನು ನೋಡಬಹುದಾಗಿದೆ. ಭಾರತದ ಪುರಾಣ ಸ್ತ್ರೀಯರ ಸಾಧ್ವಿ ಗುಣಗಳನ್ನೆಲ್ಲಾ ಮಾಸ್ತಿಯವರು ಆ 'ಬೇಬಿಲಾನ್ ಕುಮಾರಿ' ಎಂಬ ಕಥೆಯಲ್ಲಿ ಹಿಡಿದಿಟ್ಟಿದ್ದಾರೆ.

'ಆಮಾ ಸುಕ್ಬಲ್' ಎಂಬ ಒಬ್ಬ ಸಾಧ್ವಿ ಹೆಣ್ಣುಮಗಳು ತನ್ನ ತಂದೆ ಅರಿಯದೆ ಮಾಡಿದ ತಪ್ಪಿಗಾಗಿ ದಂಡ ತೆರುವ ಸಂದರ್ಭ ಬಂದಾಗ ಅವಳು ತನ್ನ ಜೀವನದ ಆಸೆಗಳನ್ನೆಲ್ಲಾ ಬಲಿ ಕೊಡಲು ಸಿದ್ಧಳಾಗುತ್ತಾಳೆ. ಬೇಬಿಲಾನ್ ದೇಶದ ಪದ್ಧತಿಯಂತೆ ಮದುವೆಯಾಗುವ ವರ ವಧುವಿಗೆ ದಕ್ಷಿಣೆಯನ್ನು ನೀಡುವುದು ವಾಡಿಕೆ ಅದರಂತೆಯೇ 'ಆಮಾಸುಕ್ಬಲ್' ತನ್ನ ತಂದೆಯು ತೆರಬೇಕಾದ ದಂಡವನ್ನು ಒಬ್ಬ ತರುಣನನ್ನು ವಿವಾಹವಾಗುವ ಮೂಲಕ ಇತ್ಯರ್ಥವಾಗುವಂತೆ ಮಾಡುತ್ತಾಳೆ. ತಂದೆ-ತಾಯಿಗಳ ಕಷ್ಟವನ್ನು ಪರಿಹರಿಸುವ ದೃಷ್ಟಿಯಿಂದ ಅವಳು ಅವರು ತೋರುವ ತರುಣನನ್ನೇ ವಿವಾಹವಾಗುತ್ತಾಳೆ. ವಿವಾಹವಾದ ನಂತರ ಕೇವಲ ಮೂರು ಹುಣ್ಣಿಮೆಯ ಕಾಲ ತನ್ನ ಗಂಡನ ಜೊತೆ ಸಂಸಾರವನ್ನು ನಡೆಸುತ್ತಾಳೆ. ಕೆಲವೇ ದಿನಗಳು ಸಂಸಾರ ನಡೆಸಿ ಗಂಡನಾದವನು ಯಾವುದೋ ವ್ಯಾಪಾರದ ಉದ್ದೇಶದಿಂದ ನಿಪ್ಪೂರಿಗೆ ಹೋದವನು ಮತ್ತೆ ಹಿಂದಿರುಗುವುದೇ ಇಲ್ಲ. ಅವನು ದೊಡ್ಡಪ್ಪನ ಮಾತುಗಳಿಗೆ ಮರುಳಾಗಿ ಬೇರೊಂದು ವಿವಾಹವಾಗಿರುತ್ತಾನೆ. ಅವನನ್ನೇ ನಂಬಿರುವ 'ಆಮಾಸುಕ್ಬಲ್' ಳ ಬಗ್ಗೆ ಯಾವುದೇ ಯೋಚನೆಯನ್ನು ಸಹ ಅವನು ಮಾಡುವುದಿಲ್ಲ. ಕಥೆಯಲ್ಲಿ ಹಮ್ಮುರಬಿ ನ್ಯಾಯ ತೀರ್ಪುಗಳ ವಿವರಣೆ ಹಾಸುಹೊಕ್ಕಾಗಿದೆ. ಅಂದರೆ ಅವನ ಕಾಲದಲ್ಲಿ ಸಾಮ್ರಾಜ್ಯ ಪ್ರತಿಯೊಂದು ವಿಚಾರದಲ್ಲೂ ನ್ಯಾಯವಾಗಿ ನಡೆದುಕೊಳ್ಳುವಂತೆ ಮಾಡಲಾಗಿತ್ತು. ಎನ್ನುವುದಕ್ಕೆ ಕೆಲವು ಉದಾಹರಣೆಗಳನ್ನು ಕಥೆಯಲ್ಲಿಯೇ ನೀಡಲಾಗಿದೆ. ಹಮ್ಮುರಬಿಯ ನ್ಯಾಯಯುತ ತೀರ್ಮಾನಗಳಿಗೆ ತಕ್ಷಶಿಲಾ ನಗರವನ್ನಾಳುತ್ತಿದ್ದ ನರೇಂದ್ರ ಹಾಗು ವಸುಮತಿ ಎಂಬ ರಾಜ ರಾಣಿಯರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾರೆ. ಇಷ್ಟಾದರೂ ಆ ಸುಂದರ ತರುಣಿಗೆ ಆದ ಮೋಸವನ್ನು ಯಾರೂ ಸಹ ಯಾಕೆ ಯೋಚಿಸುವುದಿಲ್ಲ? ಅಲ್ಲದೆ ತರಣನಾದವನು ವಿವಾಹದ ನಂತರ ಆಮಾ ಸುಕ್ಬಲ್‌ಳನ್ನು ಬಿಟ್ಟು ಹೋಗುವುದಲ್ಲದೆ ಬೇರೊಂದು ವಿವಾಹವಾಗುವುದು ಯಾವ ನ್ಯಾಯ? ಹಾಗೆಯೇ ಆ ತರುಣ ಮತ್ತೆ ತನ್ನ ಮಗಳನ್ನು ವರಿಸುತ್ತಾನೋ ಇಲ್ಲವೋ ಎಂದು ತಂದೆಯಾದವನು ನಾಲ್ಕಾರುಬಾರಿ ವಿಚಾರಿಸುತ್ತಾನೆ. ಮದುವೆಯ ಸಂದರ್ಭದಲ್ಲಿ ಮಣ್ಣಿನ ಹಲಗೆಯ ಮೇಲೆ ಸಾಕ್ಷಿಗಳಾಗಿದ್ದವರು ಸಹ ಆದ ಅನ್ಯಾಯವನ್ನು ಏಕೆ ಕೇಳುವುದಿಲ್ಲ? ಕೊನೆಗೆ ತರುಣನ ಬಳಿ ಇರುವ ಆ ದಾಖಲೆ ಹಲಗೆಯನ್ನು

ತೆಗೆದು ತರುವುದರೊಂದಿಗೆ ಅವರಿಗಾದ ಮದುವೆ ಸಂಬಂಧ ಮುರಿದು ಜೀವನದ ಹಾದಿ ಬೇರೆಯಾಗುತ್ತದೆ. ತಂದೆಯಾದವನು ತನ್ನ ಸ್ವಂತ ಮಗಳನ್ನು ಮನೆಯಲ್ಲಿಟ್ಟುಕೊಳ್ಳಲು ಯೋಚಿಸುತ್ತಾನೆ. ಕಾರಣ ನ್ಯಾಯದ ಪ್ರಕಾರ ಆಕೆಯ ಗಂಡ ದಾವೆ ಹೂಡಿದರೆ ಜನ ಎಲ್ಲಿ ನಿಂಧಿಸುವರೋ, ಅನ್ನುವ ಭಯ ಕಾಡುತ್ತದೆ. ಈ ರೀತಿಯ ಒಂದು ವ್ಯವಸ್ಥಿತ ಕಟ್ಟುನಿಟ್ಟಿನ ನಿಯಮಗಳಿದ್ದು ಸಹ ಅಮಾಸುಕ್ಟಲ್‌ಗೆ ಮೋಸ ಮಾಡಿ ಮರು ವಿವಾಹವಾದ ಆ ತರುಣನಿಗೆ ಯಾವ ಶಿಕ್ಷೆ? ಈ ಎಲ್ಲಾ ಪ್ರಶ್ನೆಗಳಿಗೆ ಈ "ಬೇಬಿಲಾನ್ ಕುಮಾರಿ" ಕಥೆ ಉತ್ತರಿಸುವುದಿಲ್ಲವಾದರೂ ಕಥಾನಾಯಕಿಯ ಸಾಧ್ವಿತನವೇ ಓದುಗರನ್ನು ಆಕರ್ಷಿತವನ್ನಾಗಿಸುತ್ತದೆ.

ಹಮ್ಮುರಬಿಯ ಕಟ್ಟುನಿಟ್ಟಿನ ನಿಯಮಗಳ ಅರಿವನ್ನು ಕಥೆಯ ಮೂಲಕ ತಿಳಿಯಪಡಿಸಲು ಯತ್ನಿಸಿದ ಮಾಸ್ತಿ ಆ ತರುಣಿಗೆ ಆದ ಮೋಸವನ್ನು ಸರಿ ಪಡಿಸುವಲ್ಲಿ ಯಶಸ್ವಿಯಾಗಲಿಲ್ಲವಾದರೂ, ಆಕೆಯು ಭಾರತದ ತಕ್ಷ ಶಿಲಾ ನಗರಕ್ಕೆ ಪ್ರವಾಸ ಕೈಗೊಂಡು ತನ್ನ ಕಾಯಕ ನಿಷ್ಠೆಯಿಂದಲೇ ಜೀವಿಸುವ ರೀತಿಯಿಂದ ಕಥೆ ಯಶಸ್ವಿಯಾಗಿಬಿಡುತ್ತದೆ. ಆ ತರುಣಿ ತನ್ನ ಜೀವಿತದಲ್ಲಿ ಅನುಬವಿಸಬೇಕಾದ ಎಲ್ಲಾ ಸುಖ ಸಂತೋಷಗಳನ್ನು ತ್ಯಾಗ ಮಾಡುತ್ತಾಳೆ. ತನ್ನ ಗಂಡನಾದವನೊಂದಿಗೆ ಯಾವ ಸುಖವನ್ನು ಪಡೆಯದ ಅವಳು ನಿಷ್ಠೆಯ ದುಡಿಮೆಯಲ್ಲಿಯೇ ಎಲ್ಲಾ ಸುಖ ಸಂತೋಷಗಳನ್ನು ಪಡೆಯಲು ಮುಂದಾಗುತ್ತಾಳೆ. ತಕ್ಷಶಿಲಾ ನಗರಕ್ಕೆ ಧನಪಾಲ ಎನ್ನುವವನೊಂದಿಗೆ ಬಂದು ಇರುವಷ್ಟು ಕಾಲವೂ ಕೈಲಾದ ಸೇವೆಯನ್ನು ನಿಷ್ಠೆಯಿಂದಲೇ ಮಾಡುತ್ತಾಳೆ. ಬೇಬಿಲಾನ್ ಎನ್ನುವ ದೇಶದಲ್ಲಿ ಬೆಳೆದ ಈ ತರುಣಿಯ ಕಾಯಕದ ದೃಷ್ಟಿ ಕತೆಯು ಒಳಗೊಂಡರಿರುವ ಸಂದೇಶದ ಧ್ವನಿಯಾಗಿದೆ. ತಕ್ಷ ಶಿಲಾ ನಗರದಲ್ಲಿ ಆ ತರುಣಿಯಿರುವಷ್ಟು ಕಾಲ ಯಾವ ಅನೈತಿಕ ಸಂಬಂಧಗಳಿಗೂ ಎಡೆಮಾಡಿಕೊಡದೆ ನಿಯಮ ಬದ್ಧವಾಗಿಯೇ ಬದುಕುತ್ತಾಳೆ.

ವಿದೇಶಿ ಹೆಣ್ಣು ಮಗಳ ನಿಷ್ಠೆಯುತ ಬದುಕನ್ನು ಕಂಡು ರಾಜ ರಾಣಿ ಸಮೇತ ಎಲ್ಲರೂ ಅವಳನ್ನು ಗೌರವಿಸುತ್ತಾರೆ. ತರುಣಿಯಾದ 'ಆಮಾ ಸುಕ್ಟಲ್'ಳನ್ನು ವರಿಸಲು ಎಷ್ಟೋ ತರುಣರು ಪ್ರಯತ್ನಿಸಿದರೂ ಆಕೆ ಮತ್ತೊಮ್ಮೆ ಮೋಸಹೋಗಲು ಇಷ್ಟಪಡದೆ ಎಲ್ಲರನ್ನು ತಿರಸ್ಕರಿಸುತ್ತಾಳೆ. ಕೊನೆಗೆ ಯಾರೊಬ್ಬರನ್ನೂ ಒಪ್ಪದೆ ಸಾಧ್ವಿ ಹೆಣ್ಣುಮಗಳಾಗಿಯೇ ತನ್ನ ದೇಶಕ್ಕೆ ಹಿಂದಿರುಗುತ್ತಾಳೆ. ತಂದೆ-ತಾಯಿಯ ಕಷ್ಟಕ್ಕೆ ಸ್ಪಂದಿಸಿ, ಗಂಡನ ಮೋಸದ ದೃಷ್ಟಿಗೆ ಬಲಿಯಾಗಿ, ಬೇರೊಂದು ದೇಶದಲ್ಲಿ ನಿಷ್ಠೆಯ ಕಾಯಕದ ಮೂಲಕ ಜನಮನ ಸೆಳೆದ 'ಬೇಬಿಲಾನ್ ಕುಮಾರಿ' ಕತೆ ನಿಜಕ್ಕೂ ಓದುಗರಲ್ಲಿ ಅಚ್ಚಳಿಯದೆ ಉಳಿದುಬಿಡುತ್ತದೆ.

ಅಧ್ಯಾಯ : ನಾಲ್ಕು

# ಲೈಂಗಿಕ ಕಟ್ಟುಪಾಡುನ್ನು ಮೀರಿದ ಮಹಿಳೆಯರ ಬಗ್ಗೆ ಮಾಸ್ತಿ ನಿಲುವು

- ಚಂದ್ರವದನಾ
- ವೆಂಕಟಿಗನ ಹೆಂಡತಿ
- ಬೀದಿಯಲ್ಲಿ ಹೋಗುವ ನಾರಿ
- ಆಂಗ್ಲನೌಕ ಕ್ಯಾಪ್ಟನ್

## ಲೈಂಗಿಕ ಕಟ್ಟುಪಾಡನ್ನು ಮೀರಿದ ಮಹಿಳೆಯರ ಬಗ್ಗೆ ಮಾಸ್ತಿ ನಿಲುವು

ಇಡೀ ಜಗತ್ತಿನಲ್ಲಿಯೇ ಭಾರತೀಯ ಮಹಿಳೆಗೆ ಒಂದು ಗೌರವಯುತವಾದ ಸ್ಥಾನವನ್ನು ನೀಡಲಾಗಿದೆ. ಅದು ವೇಧ-ಉಪನಿಷತ್ತುಗಳ ಕಾಲದಿಂದ ಇರಬಹುದು. ರಾಮಾಯಣ-ಮಹಾಭಾರತ ಕಾಲದಲ್ಲಿಯೇ ಆಗಬಹುದು, 'ಸ್ತ್ರೀ' ಯನ್ನು ಪೂಜ್ಯ ರೂಪಳನ್ನಾಗಿ ಭಾವಿಸಿದ್ದೇವೆ. ಆದ್ದರಿಂದಲೇ ವಿದ್ಯೆಗೆ ಅಧಿದೇವತೆಯನ್ನಾಗಿ ಸರಸ್ವತಿಯನ್ನೂ, ಹಣಕ್ಕೆ ಒಡತಿಯನ್ನಾಗಿ ಲಕ್ಷ್ಮಿಯನ್ನೂ ಪೂಜಿಸುತ್ತೇವೆ. ಇಷ್ಟೊಂದು ಗೌರವಯುತವಾದ ಸ್ಥಾನವನ್ನು ಅನಾಧಿಕಾಲದಿಂದಲೂ 'ಸ್ತ್ರೀ'ಗೆ ಕೊಡುತ್ತಾ ಬಂದಿದ್ದರೂ, ಸಮಾಜದಲ್ಲಿ ಅವಳಿಗೆ ಕೆಲವೊಂದು ಸಾಮಾಜಿಕ ನಿರ್ಬಂಧಗಳನ್ನೇರುತ್ತಾ ಬಂದಿದ್ದೇವೆ. ಸ್ತ್ರೀಯಾದವಳಿಗೆ ಇರುವಷ್ಟು ಸಾಮಾಜಿಕ ನಿರ್ಬಂಧಗಳು ಪುರುಷರಿಗೆ ಇರುವುದಿಲ್ಲ. ಅಂದರೆ ಪುರುಷನಾದವನಿಗೆ ಸಮಾಜದಲ್ಲಿ ಎಷ್ಟೇ ವಯಸ್ಸಿನವನಾದರೂ ಮರುವಿವಾಹದ ಅವಕಾಶವಿತ್ತು. ನಾಲ್ಕಾರು ಹೆಂಡತಿಯರನ್ನು ಪಡೆಯಬಹುದಾಗಿತ್ತು. ಅವನು ಎಷ್ಟೇ ಸ್ತ್ರೀಯರ ಜೊತೆ ಸಂಪರ್ಕವಿಟ್ಟುಕೊಂಡರೂ ಅವನನ್ನು ಸಮಾಜ ಅಷ್ಟಾಗಿ ಪರಿಗಣಿಸುವುದಿಲ್ಲ. ಆದರೆ ಹೆಣ್ಣಾದವಳು ಗಂಡನೊಂದಿಗೆ ಬಿಟ್ಟು ಬೇರೆಯವರೊಂದಿಗೆ ಯಾವುದೇ ರೀತಿಯ ದೈಹಿಕ ಸಂಬಂಧವಿಟ್ಟುಕೊಳ್ಳುವಂತಿಲ್ಲ. ಒಂದು ವೇಳೆ ಆ ರೀತಿ ಸ್ತ್ರೀಯಾದವಳು ನಡೆದುಕೊಂಡಿದ್ದೇ ಆದರೆ ಅವಳನ್ನು ಸಮಾಜದಿಂದ ಬಹಿಷ್ಕರಿಸುತ್ತಾರೆ. ಅವಳಿಗೆ 'ಸೂಳೆ' ಅಥವಾ 'ವೇಶ್ಯೆ' ಎನ್ನುವ ಹೀನಾಯ ಪಟ್ಟವನ್ನು ಕಟ್ಟುತ್ತಾರೆ. ಸಮಾಜದಲ್ಲಿ ಅವಳು ಎಲ್ಲರಂತೆ ಬದುಕುವ ಅವಕಾಶದಿಂದ ವಂಚಿತಳಾಗುತ್ತಾಳೆ. ಇಡಿ ವ್ಯವಸ್ಥೆಯೇ ಅಂತಹವರನ್ನು ದೂರವಿರಿಸುತ್ತದೆ.

ಹೆಣ್ಣಾಗಿ ಹುಟ್ಟಿದ ಮೇಲೆ ಗಂಡನನ್ನೇ ತನ್ನ ಸರ್ವಸ್ವ ಎಂದು ಭಾವಿಸಬೇಕು. ಅವನನ್ನೇ ಪೂಜಿಸಿ ಆರಾಧಿಸಬೇಕು. ಅನೇಕ ವೇಳೆ ಗಂಡನಾದವನು ಅಕಾಲಿಕ ಮರಣ ಹೊಂದಿದಾಗ, ಗಂಡನ ಹೆಣದ ಜೊತೆ ಚಿತೆಯೇರಿರುವ ಎಷ್ಟೋ ನಿದರ್ಶನಗಳು ನಮಗೆ ಇತಿಹಾಸದ ಪುಟಗಳಿಂದ ತಿಳಿದು ಬರುತ್ತವೆ. ಸ್ತ್ರೀ-ಪುರಷರ ನಡುವಿನ ಭಿನ್ನ ದೃಷ್ಟಿಕೋನಗಳು ಎಲ್ಲಾ ರಾಷ್ಟ್ರಗಳಲ್ಲೂ ಸರ್ವೇ ಸಾಮಾನ್ಯ. ಆದರೆ ಭಾರತದಂತಹ ಸಾಂಪ್ರದಾಯ ನಿಷ್ಠ ರಾಷ್ಟ್ರದಲ್ಲಿ ಸ್ವಲ್ಪ ಹೆಚ್ಚು. ಅದು ಏನೇ ಇರಲಿ ಒಂದು ದೇಶ ಎಂದ ಮೇಲೆ ಪ್ರತಿ ಸಮುದಾಯದಲ್ಲಿ ಸ್ತ್ರೀ-ಪುರುಷ ವಿವಾಹವಾದ ನಂತರ ಸಮಾಜದಲ್ಲಿ ಗೌರವಯುತವಾಗಿ ಬದುಕಬೇಕೆಂಬ ಕೆಲವು ಸೂಕ್ತ ನಿಯಮಗಳಿರುತ್ತವೆ. ಈ ನಿಯಮಗಳನ್ನು ಪಾಲಿಸಿದಾಗ ಜೀವನ ಸುಖಮಯ. ಆದರೆ ಮನುಷ್ಯ ಅಂದ ಮೇಲೆ ಎಲ್ಲಾ ಸಂದರ್ಭಗಳಲ್ಲೂ ಒಂದು ವ್ಯವಸ್ಥೆಯ ನಿಯಮಗಳನ್ನು ಅನುಸರಿಸಿಯೇ ಬದುಕುತ್ತಾನೆ

ಎಂದು ಹೇಳುವುದಕ್ಕಾಗುವುದಿಲ್ಲ. ಕೆಲವು ವೇಳೆ ವ್ಯವಸ್ಥೆಯು ನಿಯಮಗಳನ್ನು ಮೀರುವುದುಂಟು.

'ಸ್ತ್ರೀ'ಯು ವಿವಾಹವಾದ ಬಳಿಕ ಅವಳು ತನ್ನ ಗಂಡನನ್ನೇ ದೇವರೆಂದು ನಂಬಿ ಜೀವಿಸಬೇಕು. ಇಂತಹ ಸಂದರ್ಭದಲ್ಲಿ ಆ ರೀತಿ ಬದುಕಬೇಕಾದ ಹೆಣ್ಣು, ಕೆಲವು ವೇಳೆ ಆಸೆ, ಆಮಿಷಗಳಿಗೂ ಅಥವಾ ಪರಿಸ್ಥಿತಿಯ ಒತ್ತಡಕ್ಕೋ ಮಣಿದು ಬೇರೊಬ್ಬರೊಂದಿಗೆ ಲೈಂಗಿಕ ಸಂಬಂಧವನ್ನು ಬಯಸಿದಾಗ ಅಥವಾ ಅನುಭವಿಸಿದಾಗ ಸಮಾಜ ಅವಳನ್ನು ಯಾವ ದೃಷ್ಟಿಯಿಂದ ನೋಡುತ್ತದೆ ಎಂಬುದು ಗೊತ್ತಿರುವ ವಿಷಯವೆ. ಆದರೆ ಮಾಸ್ತಿಯವರು ಬರೆದಿರುವ ಕತೆಗಳಲ್ಲಿ ಹೆಣ್ಣಾದವಳು ಸಮಾಜ ಅಥವಾ ಒಂದು ವ್ಯವಸ್ಥೆ ನಿರ್ಮಿಸಿದಂತಹ ಲೈಂಗಿಕ ಕಟ್ಟುಪಾಡನ್ನು ಮೀರಿ ವರ್ತಿಸಿದಾಗ, ಅವಳನ್ನು ಕುರಿತ ಮಾಸ್ತಿಯವರ ನಿಲುವೇನು? ಎಂಬುದನ್ನು ಕೆಲವು ಕಥೆಗಳ ಮೂಲಕ ಪರಿಶೀಲನೆ ಮಾಡಬಹುದು. ಮಾಸ್ತಿಯವರ ಪ್ರತಿ ಕತೆಯೂ ಇದೇ ದೃಷ್ಟಿಯಿಂದ ಸೃಷ್ಟಿಯಾಗಿವೆ ಎಂದರ್ಥವಲ್ಲ. ಕೆಲವಾರು ಕತೆಗಳಲ್ಲಿ 'ಸ್ತ್ರೀ' ಲೈಂಗಿಕ ಕಟ್ಟುಪಾಡನ್ನು ಮೀರಿ ನಿಲ್ಲುವ ಸನ್ನಿವೇಶಗಳುಂಟು. ಇಂತಹ ಸನ್ನಿವೇಶವನ್ನು ಕುರಿತಂತೆ ಮಾಸ್ತಿಯವರ ಚಿಂತನೆ ಯಾವ ರೀತಿಯದ್ದು? ಆ ಸ್ತ್ರೀಯ ಬಗ್ಗೆ ಮಾಸ್ತಿಯವರ ನಿಲವು ಸರಿಯೇ? ಅಥವಾ ತಪ್ಪೇ? ಎನ್ನುವ ವಿಷಯುವನ್ನು ಕುರಿತು ಕೆಲವು ಕತೆಗಳ ಮೂಲಕವೇ ಚರ್ಚೆಯಾಗಬೇಕಾಗಿದೆ....

- **ಚಂದ್ರವದನಾ**

ವೃತ್ತಿನಾಟಕ ಕಂಪನಿಯಲ್ಲಿ ಬಣ್ಣ ಬಳಿದುಕೊಂಡು ಬದುಕನ್ನು ನಿರ್ವಹಿಸುವ ಚಂದ್ರವದನೆ ಎಂಬ ಜನಪ್ರಿಯ ನಟಿಯ ಕತೆ ಇದು. ನಾಟಕ ಕಂಪನಿಗಳಲ್ಲಿ ವೃತ್ತಿಯನ್ನು ನಿರ್ವಹಿಸುವ ಹೆಣ್ಣಿನ ಸಂವೇದನೆ ಹೇಗಿರುತ್ತದೆ. ಎಂಬುದನ್ನು ಕತೆ ಅತಿ ಮನೋಜ್ಞವಾಗಿ ಕಟ್ಟಿಕೊಂಡುತ್ತದೆ. ಈ ಕತೆಯಲ್ಲಿ ಬರುವ ಚಂದ್ರವದನೆ ವೇಶ್ಯೆ. ಅವಳೇನು ವೇಶ್ಯೆಯಾಗಿ ಜೀವನ ಸಾಗಿಸಬೇಕೆಂದುಕೊಂಡವಳಲ್ಲ. ಆದರೆ ಪರಿಸ್ಥಿತಿಯ ಒತ್ತಡ ಹಾಗೂ ಜೀವನವನ್ನು ನಡೆಸಲು ಬೇರೆ ದಾರಿಯಿಲ್ಲದೆ ಅವಳು ವೇಶ್ಯಯಾಗಿರುತ್ತಾಳೆ. ಚಂದ್ರವದನೆ ಎಷ್ಟು ರೂಪವಂತಳಾಗಿದ್ದಳು ಎಂಬುದನ್ನು ನಿರೂಪಕನ ಮಾತುಗಳಲ್ಲೇ ಕೇಳಬಹುದಾಗಿದೆ...

> "ನಾನು ಸೂಳೆಯರ ಹುಡುಗಿಯನ್ನು ವರ್ಣಿಸುವುದಕ್ಕೆ ಹೋದರೆ ನೀವು ನನ್ನನ್ನು ಅಯೋಗ್ಯನೆಂದು ತಿಳಿದುಕೊಳ್ಳಬಹುದು. ಆದರೆ ಅವಳ ಕತೆಯನ್ನೇ ಹೇಳುವುದಕ್ಕೆ ಹೊರಟವನು ಅವಳನ್ನು ವರ್ಣಿಸುವುದರಲ್ಲಿ ತಪ್ಪೇನು? ನಾನು ಯೋಗ್ಯ ಅಯೋಗ್ಯ ಎನ್ನುವುದನ್ನು ಇದರಿಂದ ನೀವು ನಿರ್ಧರಿಸಿದರೆ ಅದು ನಿಮ್ಮ ಯೋಗ್ಯತೆಯನ್ನು ತೋರಿಸುತ್ತದೆ. ಅಷ್ಟೆ ಅದು ಹಾಗಿರಲಿ.

ಚಂದ್ರವದನೆ ಬಹಳ ಸುಂದರಿ. ಎಂದರೆ ಅವಳ ಸೌಂದರ್ಯ ಕಾವ್ಯದಲ್ಲಿ ಕವಿಗಳು ವರ್ಣಿಸುವಂತೆ ದೋಷವೇ ಕಾಣದ ಚಿತ್ರದಂತ ಸೌಂದರ್ಯವಲ್ಲ. ಅವಳ ಬಾಯಿ ಸ್ವಲ್ಪ ಅಗಲ ಹೆಚ್ಚು, ಮೂಗು ಸ್ವಲ್ಪ ದೊಡ್ಡದು. ಮುಖದ ಉದ್ದಕ್ಕೆ ಅಗಲಹೆಚ್ಚು. ಕೆನ್ನೆ ಚಪ್ಪಟೆಯಾಗಿ ಕಾಣುತ್ತಿದ್ದಿತು. ಹಣೆ ಚಿಕ್ಕದು. ಆದರೇನು? ತುಟಿಯ ರೇಕು ಹವಳದಂತೆ ಮಿನುಗುತ್ತಿತ್ತು. ನಕ್ಕರೆ ಹಲ್ಲು ಸಾಲು ಮುದ್ದಾಗಿ ಕಾಣುವುದು. ಮೂಗು ದಪ್ಪನಾದರೂ ಆ ಮುಖದಲ್ಲಿ ಚೆನ್ನಾಗಿ ಒಪ್ಪುತ್ತಿತ್ತು. ಕಣ್ಣುಗಳು ಪಳಪಳನೆ ತೊಳಗುವುದು. ಹಣೆಯೂ ಮುಂಗುರುಳೂ ಇದ್ದ ರೀತಿಯಲ್ಲಿ ಹಣೆ ಚಿಕ್ಕದು ಎಂಬ ಯೋಚನೆಯೇ ನಮಗೆ ಬರುತ್ತಿರಲಿಲ್ಲ. ಇಷ್ಟಕ್ಕೆ ಚೆನ್ನವೆನ್ನುವುದು ಚೆನ್ನವಾಗಿರುವ ಅಂಗಗಳ ಜೋಡಣೆಯಿಂದ ಬರುವುದಿಲ್ಲ. ತಪ್ಪೇ ಇಲ್ಲದ ಅವಯವಗಳನ್ನು ಜೋಡಿಸಿದ ಮರದಗೊಂಬೆ ಬಹಳ ಚೆನ್ನಾಗಿರುವುದೇ? ಸಾಮಾನ್ಯವಾದ ಹೆಂಗಸು ಕೂಡ ಉಲ್ಲಾಸವಾಗಿ ನಗುನಗುತ್ತಾ ಕಂಡರೆ ಸಂತೋಷವಾಗಿರುತ್ತದೆ. ಚಂದ್ರವದನೆಯ ಚೆನ್ನ ಈ ಜೀವಕಳೆಯ ಚೆನ್ನ. ಇನ್ನೂ ಹುಡುಗಿ ಹದಿನಾರು ವಯಸ್ಸು, ಜನರು ತನ್ನನ್ನು ನೋಡುವುದಕ್ಕೆ ಬರುತ್ತಾರೆಂದು ಅವಳಿಗೊಂದು ಉತ್ಸಾಹ. ಅವರನ್ನು ಮೆಚ್ಚಿಸಬೇಕೆಂದು ಆಸೆ. ಇವುಗಳಿಂದ ಅವಳಿಗೆ ಒಂದು ಬೆಡಗು ಬರುತ್ತಿದ್ದಿತು".[1]

ಚಂದ್ರವದನೆಯು ಪಾತ್ರಗಳನ್ನು ನೋಡಲು ಕಾಲೇಜಿನ ಯುವಕರಿಂದ ಮುದುಕರವರೆಗೂ ಬರುತ್ತಿದ್ದರು. ಮಾಧವರಾಯ ಎಂಬ ಯೋಗ್ಯನಾದವನು ಸಹ ಚಂದ್ರವದನೆಯ ಪಾತ್ರವನ್ನು ನೋಡಲು ಸದಾ ಹೋಗುತ್ತಿದ್ದದ್ದು ಗಮನಿಸಿದರೆ, ಅವಳಲ್ಲಿ ಇನ್ನೆಷ್ಟು ಆಕರ್ಷಣೀಯ ಗುಣವಿತ್ತು ಎಂದು ಗೊತ್ತಾಗುತ್ತದೆ. ಚಂದ್ರವದನೆ ವೇಶ್ಯಯಾಗಿ ಜೀವನ ಸಾಗಿಸಬೇಕೆಂದು ನಾಟಕ ಕಂಪನಿಗೆ ಬಂದವಳಲ್ಲ. ಆದರೆ ಸೂರಪ್ಪ ಎಂಬ ಅವರ ಮಾವನ ವಕ್ರ ದೃಷ್ಟಿಗೆ ಬಲಿಯಾಗಿ, ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಅವಳು ವೇಶ್ಯೆಯಾಗುತ್ತಾಳೆ. ಈ ರೀತಿಯ ಎಷ್ಟೋ ಪಾತ್ರಗಳು ಪ್ರಸ್ತುತ ಸಿನಿಮಾ ಜಗತ್ತಿನಲ್ಲಿ ದೊರೆಯುತ್ತವೆ. ಒಂದು ಕಾಲಕ್ಕೆ ನಾಟಕ ಕಂಪನಿಗಳಲ್ಲಿ ಈ ರೀತಿಯ ನಿಕೃಷ್ಟ ಜೀವನಕ್ಕೆ ಎಷ್ಟೋ ಅರಿಯದ ಹುಡುಗಿಯರು ಬಲಿಯಾಗಿದ್ದರು. ಆದರೆ ಇಂದು ಸಿನಿಮಾದ ನಾಯಕಿಯ ಆಸೆ ತೋರಿಸಿ ಅವಳನ್ನು ಅನೇಕ ಹೀನಾಯ ಕೃತ್ಯಗಳಿಗೆ ಬಳಸಿಕೊಳ್ಳುತ್ತಿದ್ದಾರೆ. 'ಚಂದ್ರವದನಾ' ಎಂಬುದು ಒಂದು ಕತೆಯೇ ಆಗಿರಬಹುದು. ಆದರೂ ಅದರಲ್ಲಿ ಎಷ್ಟೋ ವಾಸ್ತವಾಂಶಗಳು ಅಡಗಿರುವುದನ್ನು ಗಮನಿಸಬಹುದು.

'ಚಂದ್ರವದನಾ' ವೇಶ್ಯೆಯೊಬ್ಬಳ ಮಾತೃಪ್ರೇಮದ ಹೃದ್ಯ ಕತೆ ಆಗಿರಬಹುದು. ಅವಳಿಗೂ ಒಂದು ಮನಸ್ಸಿದೆ, ಪ್ರೀತಿಸುವ ಒಂದು ಹೃದಯವಿದೆ. ಆದರೆ ಆದನ್ನು

---

1. ಮಾ.ವೆಂ.ಅಯ್ಯಂಗಾರ್; ಸಣ್ಣಕತೆಗಳು, ಸಂಪುಟ ೩ (ಎಂ.ಜಿ.ಎ.ಕೆ. ಟ್ರಸ್ಟ್, ಬೆಂಗಳೂರು–೧೯೯೦) ಪು.ಸಂ. ೩, ೪

ಅರ್ಥ ಮಾಡಿಕೊಳ್ಳಬೇಕಾದ ಇತರೆ ಮನಸ್ಸುಗಳು ಇಲ್ಲದೆ ಹೋದಾಗ ಅವಳ ಜೀವನ ದುರಂತವಾಗಿಬಿಡುತ್ತದೆ. ಆದರೆ ಮಾಸ್ತಿಯವರಲ್ಲಿ ನೊಂದ ಮನಸ್ಸನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಇದೆ. ಆದ್ದರಿಂದಲೇ ಚಂದ್ರವದನೆ ಎಂಬ ವೇಶ್ಯೆಯ ಬಗ್ಗೆ ಅವರ ಸಹಾನುಭೂತಿ ವ್ಯಕ್ತವಾಗುತ್ತಿರುವುದು. ಸಾಮಾನ್ಯವಾಗಿ ಸಾಮಾಜಿಕ ಕಟ್ಟುಪಾಡನ್ನು ಮೀರಿ ಲೈಂಗಿಕ ಸಂಬಂಧವನ್ನು ಅನುಭವಿಸುವವರನ್ನು ಸಮಾಜ ಯಾವ ದೃಷ್ಟಿಯಿಂದ ನೋಡುತ್ತದೆ ಎಂದರೆ, ಅವಳನ್ನು ವೇಶ್ಯೆ ಅಥವಾ ಸೂಳೆ ಅನ್ನುವ ಪಟ್ಟಕಟ್ಟಿ, ಅದೇ ದೃಷ್ಟಿಕೋನದಿಂದ ನೋಡುವ ಪರಿಸ್ಥಿತಿಯಿರುತ್ತದೆ. ಒಂದು ಸಲ ಅವಳು ಆ ಪಟ್ಟವನ್ನು ಧರಿಸಿದ ಮೇಲೆ ಅವಳ ಜೀವಿತಾವಧಿ ಅದನ್ನು ಕಳಚಿಕೊಳ್ಳಲು ಸಾಧ್ಯವಾಗುವುದೇ ಇಲ್ಲ.

ವೇಶ್ಯೆಯೊಬ್ಬಳ ತಾಯ್ತನವನ್ನು ಕುರಿತ ಕನಿಕರದ ಕತೆ 'ಚಂದ್ರವದನಾ' ತನ್ನ ಮೋಹಕ ಲಾವಣ್ಯದಿಂದ ಮನೋಜ್ಞ ಅಭಿನಯದಿಂದ ರಸಿಕರ ಕಣ್ಮನಗಳಿಗೆ ಹಬ್ಬವಾಗಿದ್ದ ಬೆಡಗಿನ ಚಂದ್ರವದನೆ ಗರ್ಭವತಿಯಾಗುತ್ತಾಳೆ. ಆಗ ಚಂದ್ರವದನೆಯ ಮಾವ ಅವಳಿಗೆ ಮಗುವಾದರೆ ಅಂಗಸೌಂದರ್ಯ ಹಾಳಾಗಬಹುದು ಎಂದು ಯೋಚಿಸುತ್ತಾನೆ. ಆ ರೀತಿ ಆದರೆ ಅವಳಿಗೆ ಮುಂದೆ ಪ್ರೇಕ್ಷಕರನ್ನು ಆಕರ್ಷಿಸಲು ಅಸಾಧ್ಯವಾಗಿ, ಆದಾಯ ಕಡಿಮೆಯಾಗುವುದೆಂದು ಭಾವಿಸಿದ ಮಾವ ಸೂರಪ್ಪ ಅವಳು ತಾಯಿಯಾಗದಂತೆ ತಡೆಯಲು ಪ್ರಯತ್ನಿಸುತ್ತಾನೆ. ಸೂರಪ್ಪನ ದೃಷ್ಟಿಯಲ್ಲಿ ಚಂದ್ರವದನೆ ಕೇವಲ ಹಣವನ್ನು ಗಳಿಸಿಕೊಡಬಲ್ಲ ಒಬ್ಬ ವೇಶ್ಯೆ ಅಷ್ಟೆ. ಅವಳಿಗೂ ನೂರಾರು ಆಸೆ ಆಕಾಂಕ್ಷೆಗಳಿರುತ್ತವೆ ಎನ್ನುವುದನ್ನು ಸೂರಪ್ಪ ಎಂದೂ ಯೋಚಿಸುವುದಿಲ್ಲ. ಅವನಿಗೆ ಚಿಂತೆಯೆಂದರೆ, ಚಂದ್ರವದನೆ ತಾಯಿಯಾದರೆ ನಾಟಕ ನೋಡಲು ಬರುವ ಪ್ರೇಕ್ಷಕರು ಎಲ್ಲಿ ಕಡಿಯಾಗಿಬಿಡುವರೋ ಅನ್ನುವುದೊಂದೇ, ಇಂತಹ ಪರಿಸ್ಥಿತಿಯನ್ನು ಧೈರ್ಯವಾಗಿ ಎದುರಿಸಿ ನಿಲ್ಲುತ್ತಾಳೆ ಚಂದ್ರವದನೆ. ಈ ಸಾಮಾಜಿಕ ತೊಡಕುಗಳೆಲ್ಲವನ್ನೂ ಕತೆಯಲ್ಲಿ ತಾಯ್ತನ ಗೆದ್ದು ವಿಜೃಂಭಿಸುತ್ತದೆ; ಯಾವ ತ್ಯಾಗವನ್ನಾದರೂ ಮಾಡಿ ತಾನು ಮಗುವಿನ ಮಾತೆಯಾಗಬೇಕೆನ್ನುವ ಚಂದ್ರವದನೆಯ ಹಂಬಲ, ಅದಕ್ಕಾಗಿ ಆಕೆ ಮಾಡಿದ ಸಾಹಸ ಕಾರ್ಯಗಳು ಅತ್ಯಂತ ರೋಚಕವಾಗಿವೆ. ಅದೇ ರೀತಿ ಗಂಭೀರ ಸ್ವರೂಪದ್ದಾಗಿವೆ. ಹೆಣ್ಣಾದ ಮೇಲೆ ಗೃಹಣಿಯಾಗಲೀ, ವೇಶ್ಯೆಯಾಗಲೀ, ಶ್ರೀಮಂತಳಾಗಲೀ ದರಿದ್ರಳಾಗಲೀ, ಸುರೂಪಿಯಾಗಲೀ ಕುರೂಪಿಯಾಗಲೀ ಅವಳಿಗೆ ತಾಯಿಯಾಗುವುದು ಜೀವನದ ಒಂದು ಉನ್ನತವಾದ ಪುಣ್ಯ ಪದವಿ; ಮಹತ್ತರ ಸಾಧನೆ. ಹೆಣ್ಣಾದವಳಿಗೆ ರಾಜ್ಯವನ್ನಾಳುವ ರಾಜಕುಮಾರಿಯ ಪದವಿ ದೊರೆತರೂ ಅವಳಲ್ಲೂ ತಾಯ್ತನದ ಆಕಾಂಕ್ಷೆ ಇದ್ದೇ ಇರುತ್ತದೆ. ಜಗತ್ತಿನಲ್ಲಿ ಹಣಕೊಟ್ಟು ಯಾವುದನ್ನಾದರೂ ಗಳಿಸಬಹುದು. ಆದರೆ ತಾಯಿಯ ಪ್ರೀತಿಯನ್ನು ಎಂದಿಗೂ ಹಣಕೊಟ್ಟು ಖರೀದಿಸಲಾಗುವುದಿಲ್ಲ. ಆದ್ದರಿಂದ ಹೆಣ್ಣಾದವಳು ತಾಯ್ತನದ

ಆಕಾಂಕ್ಷೆಗೆ ಯಾವ ಬೆಲೆಯನ್ನಾದರೂ ತೆರಲು ಸಿದ್ಧವಾಗುತ್ತಾಳೆ ಎಂಬುದರ ರಮ್ಯ, ಅದ್ಭುತ ನಿರೂಪಣೆ ಇಲ್ಲಿದೆ. ಮಾಸ್ತಿಯವರಿಗೆ ಸ್ತ್ರೀಯರ ಬಗೆಗೆ ಅನ್ಯಾದೃಶ್ಯವಾದ ಆದರ ಅನುಕಂಪಗಳಿರುವುದು ಅವರ ಸಾಹಿತ್ಯವನ್ನು ಓದಿದ ಪ್ರತಿಯೊಬ್ಬರಿಗೂ ಗೋಚರಿಸುತ್ತದೆ. ವೇಶ್ಯೆಯಾದರೂ ಮಾಸ್ತಿಯವರಿಗೆ ಚಂದ್ರವದನೆಯ ಬಗ್ಗೆ ಇರುವಂತಹ ಆದರ – ಅನುಕಂಪಗಳು ನಮ್ಮ ಮನಸ್ಸನ್ನು ಹಿಡಿದಿಡುತ್ತವೆ. ಆದ್ದರಿಂದಲೇ ಇದು ಒಂದು ನವೋದಯ ಸಾಹಿತ್ಯದ  ಮಾನವೀಯತೆಯ ವಿಕಾಸದ ಕಥನ ಎಂದು ನನಗನ್ನಿಸುತ್ತದೆ.

➢ **ವೆಂಕಟಿಗನ ಹೆಂಡತಿ**

ವೆಂಕಟಿಗ ಬಡ ಕೂಲಿಕಾರ ಹಾಗೂ ತರುಣ. ಹೆಂಡತಿಯನ್ನು ಬಹುವಾಗಿ ಪ್ರೀತಿಸುವಾತ. ಅವನು ತನ್ನ ಅತ್ತೆಯ ಮಗಳು ರಂಗಿಯನ್ನೇ ವಿವಾಹವಾಗಿರುತ್ತಾನೆ. ಆದರೆ ಕೆಲವೇ ದಿನಗಳಲ್ಲಿ ಅದೇ ಹಳ್ಳಿಯ ಶ್ರೀಮಂತ ರೆಡ್ಡಿಯೊಬ್ಬನು ಹಣ, ವಸ್ತು, ಒಡವೆಗಳ ಆಸೆ ಆಮಿಷಗಳನ್ನು ತೋರಿಸಿ, ವೆಂಕಟಿಗನ ಹೆಂಡತಿಯನ್ನು ಬಲೆಯಲ್ಲಿ ಹಾಕಿಕೊಳ್ಳುತ್ತಾನೆ. ಇದರಿಂದ ಬೇಸತ್ತ ವೆಂಕಟಿಗ ಹಳ್ಳಿಯನ್ನು ಬಿಟ್ಟು ಬೆಂಗಳೂರು ಸೇರುತ್ತಾನೆ. ಅವನು ಬೆಂಗಳೂರು ಸೇರಿದರೂ ಇಂದಲ್ಲ ನಾಳೆ ತನ್ನ ಹೆಂಡತಿ ಬರಬಹುದು ಎನ್ನುವ ನಂಬಿಕೆಯಿಂದಲೇ ಜೀವನ ಸಾಗಿಸುತ್ತಿರುತ್ತಾನೆ. ಇಂತಹ ಉದಾತ್ತವಾದ ಪಾತ್ರವನ್ನು ಮಾಸ್ತಿಯವರು ತುಂಬಾ ಸಹಜವೆಂಬಂತೆ ಚಿತ್ರಿಸಿದ್ದಾರೆ. ಡಾ.ಎಚ್.ಜೆ. ಲಕ್ಕಪ್ಪಗೌಡ 'ವೆಂಕಟಿಗನ ಹೆಂಡತಿ' ಕಥೆಯ ಬಗ್ಗೆ ಮಾತನಾಡುತ್ತಾ, ಮಾಸ್ತಿಯವರ ನಿಜವಾದ ಸ್ಪಂತಿಕೆ ಎಂತಹುದು ಎನ್ನುವುದನ್ನು ವಿವರಿಸಿದ್ದಾರೆ. 'ವೆಂಕಟಿಗನ ಹೆಂಡತಿ' ಕತೆಯ ಬಗ್ಗೆ ಅವರ ಮಾತುಗಳನ್ನೇ ಗಮನಿಸಬಹುದಾಗಿದೆ..........

> "ಹೆಣ್ಣು ಗಂಡಿನ ಪ್ರೇಮದ ಮಹೋನ್ನತಿ ಇರುವುದು ಕೇವಲ ದೇಹ ಸಂಪರ್ಕದಲ್ಲಲ್ಲ; ಅವರ ಮನೋಧರ್ಮದಲ್ಲಿ – ಎನ್ನುವುದರ ಜೀವಂತ ಚಿತ್ರಣ 'ವೆಂಕಟಿಗನ ಹೆಂಡತಿ; ತನ್ನ ಹೆಂಡತಿ ತನ್ನನ್ನುಳಿದು ಶ್ರೀಮಂತಿಕೆಯ ಆಮಿಷಕ್ಕೊಳಗಾಗಿ ಬೇರೊಬ್ಬನನ್ನು ಸೇರಿದರೂ, ಮನೆ ತನದ ಮರ್ಯಾದೆ ಮಣ್ಣು ಪಾಲಾಯಿತೆಂದು ಹೆತ್ತವಳೇ ಹಳಹಳಿಸಿದರೂ ವೆಂಕಟಿಗ ಚಿತ್ತಸ್ಖಲಿತನಾಗುವುದಿಲ್ಲ, ಭಾವಾವೇಶಗಳಿಗೆ ಒಳಗಾಗುವುದಿಲ್ಲ, ಪ್ರತೀಕಾರದ ಪ್ರಚಂಡಾಗ್ನಿಯನ್ನು ಹೃದಯದಲ್ಲಿ ಹೊರುವುದಿಲ್ಲ. ಬದಲು, ಅವಳ ಕ್ಷಣಿಕ ದೌರ್ಬಲ್ಯಕ್ಕಾಗಿ ಅಪ್ರಬುದ್ಧ ಮನಸ್ಸಿಗಾಗಿ ಮರುಗುತ್ತಾನೆ. ಅವಳಿಗೆ ಒಳಿತಾಗಲೆಂದು ಹಾರೈಸಿ ಅವಳಿಂದ ದೂರ ಸರಿಯುತ್ತಾನೆ. ಕೊನೆಗೆ ಮಡದಿಯನ್ನಪಹರಿಸಿದ ಶ್ರೀಮಂತ ತಕ್ಕ ಸಾವನ್ನು ಪಡೆದಾಗ ಆ ಹೆಣ್ಣು ಮತ್ತೆ ಮನದಿನಿಯನನ್ನು ಅರಿಸಿಕೊಂಡು ಬರುತ್ತಾಳೆ. ಆಗಲೂ ಹೇವರಿಸದೆ, ಅಶುಚಿಯ ಭಾವನೆಯನ್ನು ಮನಸ್ಸಿಗೆ ತಾರದೆ, ತೆರದ ಹೃದಯದಿಂದ ಉದಾತ್ತ ಅಂತಃಕರಣದಿಂದ ಅವಳನ್ನು ವೆಂಕಟಿಗ ಆಹ್ವಾನಿಸುತ್ತಾನೆ. ಬೇರೊಬ್ಬನಿಂದ ಜನಿಸಿದ ಮಗುವನ್ನು ಮಡದಿಯ ಸಂತಸಕ್ಕಾಗಿ ತನ್ನದೆಂಬಂತೆಯೇ ಪ್ರೀತಿಸುತ್ತಾನೆ.

ಈ ವಿಶಾಲ ಮನೋಭಾವ, ನಿರ್ಮಲ ಸಹಾನುಭೂತಿ, ಅಕುಟಿಲ ಅಕ್ಕರೆ, ಸ್ಥಿತಪ್ರಜ್ಞೆ ವೆಂಕಟಿಗನ ಪಾತ್ರದಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿವೆ; ಆ ಸಾಮಾನ್ಯ ಕೂಲಿಕಾರನ ಅಸಾಧಾರಣ ಹೃದಯ ಶ್ರೀಮಂತಿಕೆಯನ್ನು ಪ್ರಕಟಗೊಳಿಸಿವೆ. ಹರಿಹರ ತನ್ನ ರಗಳೆಗಳಲ್ಲಿ ಮಾಡಿದಂತೆ, ಕೈಲಾಸಂ ತಮ್ಮ ನಾಟಕಗಳಲ್ಲಿ ಮಾಡಿದಂತೆ ಶ್ರೀನಿವಾಸರು ತಮ್ಮ ಕತೆಗಳ ಹೃದಯ ಸಿಂಹಾಸನದಲ್ಲಿ ಸಾಮಾನ್ಯತಾಶ್ರೀಗೆ ವೈಭವದ ಪಟ್ಟ ಕಟ್ಟಿ ಕ್ರಾಂತಿಯನ್ನೇ ಮಾಡಿದ್ದಾರೆ. ಕತೆಯೊಳಗೆ ಕತೆ ಹುಟ್ಟುವ ಇಲ್ಲಿಯ ತಂತ್ರವೂ ಅತ್ಯಂತ ಸಹಜವಾಗಿದ್ದು ಉಚಿತವಾಗಿದ್ದು ವಸ್ತುವಿನ ಸ್ವರೂಪಕ್ಕೆ ತಕ್ಕದಾಗಿದೆ".[2]

'ವೆಂಕಟಿಗನ ಹೆಂಡತಿ' ಕತೆಯಲ್ಲಿ ದಾಂಪತ್ಯದ ಕಟ್ಟುಪಾಡನ್ನು ಮುರಿದ ಹೆಂಡತಿಯನ್ನು ಉದಾತ್ತವಾಗಿ ಕ್ಷಮಿಸಿ ಮರಳಿ ಕೂಡಿದ ಗಂಡನನ್ನು ಕಾಣುತ್ತೇವೆ. ಆದರೂ ಕತೆಯನ್ನು ಗಮನಿಸುತ್ತಾ ಹೋದಂತೆಲ್ಲಾ ಅನೇಕ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಈಗ, ಶ್ರೀಮಂತನಿಂದ ಪಡೆದಿದ್ದ ಒಡವೆ ವಸ್ತ್ರಗಳನ್ನೆಲ್ಲಾ ಅಲ್ಲೇ ಬಿಟ್ಟು ಬರುವ ರಂಗಿ ಆ ಶ್ರೀಮಂತನಿಗೆ ಹುಟ್ಟಿದ ಮಗುವನ್ನೇಕೆ ಬಿಟ್ಟು ಬರಲಿಲ್ಲ? ಮಾಸ್ತಿಯವರು ಈ ಕತೆಯಲ್ಲಿ ಹೆಣ್ಣನ್ನು ಅಪರಾಧಿಯಂತೆ ಚಿತ್ರಿಸಿಲ್ಲವೆಂಬುದು ಮುಖ್ಯವಾದ ಸಂಗತಿಯಲ್ಲವೇ? ರಂಗಿಯ ತಾಯಿಗೆ ಇರುವಷ್ಟು ಕೋಪ, ರೋಷ ವೆಂಕಟಿಗನಲ್ಲಿ ಇಲ್ಲದೆ ಹೋಯಿತೇ? ಹೀಗೆ ಅನೇಕ ಪ್ರಶ್ನೆಗಳು ಕತೆ ಓದಬೇಕಾದರೆ ನಮ್ಮಲ್ಲಿ ಮೂಡುತ್ತವೆಯಾದರೂ, ಈ ಎಲ್ಲಾ ಪ್ರಶ್ನೆಗಳಿಗೆ ಮಾಸ್ತಿಯವರ ಒಂದೇ ಉತ್ತರ – ವೆಂಕಟಿಗನ ಉದಾತ್ತತೆ. ಆದ್ದರಿಂದಲೇ ಮಾಸ್ತಿಯವರು ಕತೆಯ ಪ್ರಾರಂಭದಲ್ಲಿಯೇ ಎರಡು ಗರುಡ ಪಕ್ಷಿಗಳನ್ನೂ ಒಂದು ಹದ್ದನ್ನೂ ತಂದಿರುವುದನ್ನು ನಾವು ಗಮನಿಸಬಹುದು. ಗರುಡ ಪಕ್ಷಿಗಳು ವೆಂಕಟಿಗ ಮತ್ತು ರಂಗಿಯನ್ನು ಸೂಚಿಸಿದರೆ, ಹದ್ದು ಶ್ರೀಮಂತ ರೆಡ್ಡಿಯ ಸಂಕೇತವಾಗಿ ನಿಲ್ಲುತ್ತದೆ.

'ವೆಂಕಟಿಗನ ಹೆಂಡತಿ' ಈಗಾಗಲೇ ಸಾಕಷ್ಟು ವಿಶ್ಲೇಷಣೆಗೆ ಒಳಗಾದ ಕತೆ, ಈ ಕತೆಯ ಶಕ್ತಿ ಇರುವುದು ವೆಂಕಟಿಗನ ಮನಸ್ಸಿನ ಔದಾರ್ಯ ಹಾಗೂ ದೊಡ್ಡತನದಲ್ಲಿ ಅಷ್ಟೇ ಅಲ್ಲ ಕತೆಯಲ್ಲಿ ಕುತೂಹಲ ಹುಟ್ಟಿಸುವ ಅಂಶ ವೆಂಕಟಿಗನ ಈ ಔದಾರ್ಯದ ಹಿಂದೆ ಸಂಪ್ರದಾಯ ಅಥವಾ ಸಂಸ್ಕೃತಿಯ ಬೆನ್ನೆಲುಬೇನಾದರೂ ಇದೆಯೆ ಎನ್ನುವ ಪ್ರಶ್ನೆ. ದಾರಿತಪ್ಪಿ ಶ್ರೀಮಂತನೊಬ್ಬನ ಜತೆ ಅನೈತಿಕ ಸಂಬಂಧವಿಟ್ಟುಕೊಂಡ ಹೆಂಡತಿಯ ಬಗ್ಗೆ ಔದಾರ್ಯ ತೋರಿಸುವ ಕತೆಯ ಚೌಕಟ್ಟಿನಲ್ಲಿ ಇರುವುದಾದರೂ ಏನು? ವೆಂಕಟಿಗ ನಿರೂಪಕನಿಗೆ ಹೇಳುವ ಮಾತುಗಳಿವು. "ಈ ಹೆಣ್ಣು ಅನ್ನುವುದರ ಮನಸ್ಸು ಹೇಗೆ ಒಲಿದರೂ ಆಯಿತು. ಈ ತಿಟ್ಟು ಯಾವ ಕಡೆಗೆ ಇಳಿದರೆ ಬೇಡ? ಈ ಹೊತ್ತು ನಾನು ಗಂಡ, ನನ್ನ ಕಡೆಗೆ ನೋಡುತಿರುತ್ತಾಳೆ, ನಾಳೆ ಯಾವನೋ ಚೆಲುವ ಎದುರಿಗೆ ಬರ್ತಾನೆ: ಅವನ ಕಡೆ ನೋಡ್ತಾಳೆ. ಬೇಕು ಅಂತ ನೋಡಿದಳೆ? ಕಂಡ ದೊಡ್ಡ ಮುನುಷ್ಯ

---

2. ಡಾ॥ ಎಚ್.ಜಿ. ಲಕ್ಕಪ್ಪಗೌಡ: ಸಾಹಿತ್ಯ ಬಹುಮುಖಿಚಿಂತನೆ. (ಸಿ.ವಿ.ಜಿ. ಪಬ್ಲಿಕೇಶನ್ಸ್ – ೨೦೦೩) ಪು.ಸಂ. ೨೮೮.

ಸುಮ್ಮನಿದ್ದರೆ ಸರಿಹೋಯಿತು. ಕೆಣಕಿದರೆ? ಎಲ್ಲಾ ಹೆಣ್ಣು ಬೇಡ ಎಂತಲೇ ಎನ್ನುತ್ತದೆಯೆ? ಅವನ ಮೀಸೆಯೇನು, ಅವನ ರುಮಾಲೇನು, ಅವನ ಆ ಕುದುರೆಯೇರಿ ಹೋಗ್ತಾ ಅವನ ದರ್ಪ ಏನು"? (ಮಾ.ವೆಂ.ಅಯ್ಯಂಗಾರ್, ಸಣ್ಣಕತೆಗಳು ಸಂ.೩. ಪು.ಸಂ. ೪೪) ಇದು ವೆಂಕಟಿಗ ತನ್ನ ಮುದ್ದಿನ ಹೆಂಡತಿಯನ್ನು ಕ್ಷಮಿಸುವ ಔದಾರ್ಯದ ಹಿನ್ನೆಲೆಯಾಗಿದೆ. ಮನುಷ್ಯನ ಏಳ್ಗೆಗೆ ಕಾರಣವಾಗುವ ಪ್ರವೃತ್ತಿಗಳ ಜತೆಗೆ ಅವನನ್ನು ದಾರಿತಪ್ಪಿಸುವ ಪ್ರವೃತ್ತಿಗಳೂ ಬಲವಾಗಿವೆ ಎನ್ನುವ ಪ್ರಬದ್ಧ ಮನೋಭಾವ, ತಿಳಿವಳಿಕೆ ಇಲ್ಲಿದೆ. ಆದರೆ ಈ ತಿಳಿವಳಿಕೆ ಸಾಂಪ್ರದಾಯಿಕ ಅಥವಾ ಒಂದು ಸಂಸ್ಕೃತಿಗೆ ದಕ್ಕಿದ್ದು ಎನ್ನುವ ಸೂಚನೆ ಕತೆಯಲ್ಲಿ ಎಲ್ಲಯೂ ಇಲ್ಲ. ಮುಂದೆ ವೆಂಕಟಿಗನ ಈ ನೈತಿಕ ತೀರ್ಮಾನ ತೀರ ವೈಯಕ್ತಿಕವಾದದ್ದು, ವಿಶಿಷ್ಟವಾದ್ದು, ಸಮಂಜಸವಾದುದು ಎನ್ನುವ ಸ್ಪಷ್ಟನೆ ಕೂಡ ಕತೆಯಲ್ಲಿಯೇ ದೊರೆಯುತ್ತದೆ. ವೆಂಕಟಿಗ ತನ್ನ ಅತ್ತೆ ಆಡುವ ಮನೆಯ ಮರ್ಯಾದೆಯ ಮಾತುಗಳನ್ನು, ಜನರು ತನ್ನ ಬಗ್ಗೆ ತೋರಬಹುದಾದ ಕುಹಕವನ್ನು ಕಡೆಗಾಣಿಸಿ ಹೆಂಡತಿಯನ್ನು ಕ್ಷಮಿಸುವ ಹೊತ್ತಿಗೆ ಹೀಗೆ ಹೇಳುತ್ತಾನೆ.

> "ನನಗೆ ಇದು ಯಾವುದೂ ಒಪ್ಪಿಗೆಯಾಗಲಿಲ್ಲ, ನಾಯನ ನನ್ನ ಹೆಂಡತಿ ವಿಷಯಕ್ಕೆ ನಾನು ಹೇಗೆ ನಡೆದುಕೊಳ್ಳಬೇಕು ಎನ್ನುವುದು ಒಂದೇ ನನಗೆ ಯೋಚನೆ. ಜನ ನನ್ನನ್ನು ಏನು ಹೇಳುತ್ತಾರೆ. ಜನ ಅವಳ ತೌರನ್ನು ಏನು ಹೇಳುತ್ತಾರೆ. ಸಾಹುಕಾರನಿಗೆ ಏನಾಗುತ್ತದೆ, ಇದೆಲ್ಲ ಅವಾಂತರದ ಮಾತು. ನಾನು ಕೈಹಿಡಿದ ಹುಡುಗಿ ಮನಚೆದರಿ ಬೇರೆ ಕಡೆ ಹೋದಳು. ನಾನೇನು ಮಾಡಬೇಕು? ಬೈಯಲಾ? ಹೊಡೆಯಲಾ? ಬಲವಂತ ಮಾಡಲಾ? ಬಿಟ್ಟುಬಿಟ್ಟೆ ಎನ್ನಲಾ? ಏನು ಮಾಡಲಿ? ನನ್ನ ಸ್ವಭಾವಕ್ಕೆ ನಾನು ಏನು ಮಾಡುತ್ತಿದ್ದನೋ ಅದೇ ಸಾಧ್ಯ. ಕೈಹಿಡಿದ ಹೆಣ್ಣು ಕೈಬಿಟ್ಟಳು. ನನಗೆ ಬೇಸರವಾಯ್ತು. ಕೋಪ ಬರಲಿಲ್ಲ. ಇನ್ನೊಬ್ಬ ಹೆಂಗಸು ಬೇಕನ್ನಿಸಲಿಲ್ಲ. ಇಲ್ಲದಿದ್ದರೆ ಇನ್ನೊಂದು ದಿನ, ಈ ಜನ್ಮಕ್ಕಲ್ಲದೆ ಇದ್ದರೆ ಇನ್ನೊಂದು ಜನ್ಮಕ್ಕಾದರೂ, ನಾನು ಇವಳಿಗೆ ದಿಕ್ಕಾಗಿರಬೇಕು ಎಂದೇ ನನ್ನ ತಿಳುವಳಿಕೆ".[3]

ಮಾಸ್ತಿಯುವರು ಇಲ್ಲಿ ವೆಂಕಟಿಗನ ನೈತಿಕ ನಿರ್ಧಾರದ ವೈಯಕ್ತಿಕತೆಗೆ ಒತ್ತುಕೊಟ್ಟಿದ್ದಾರೆಂದು ತೋರುತ್ತದೆ. ವೆಂಕಟಿಗನಲ್ಲಿ ಈ ಉದಾತ್ತವಾದವನ್ನು ಮಾಸ್ತಿಯವರು ಶ್ರದ್ಧೆಯಿಂದ ಎತ್ತಿಹಿಡಿಯಬೇಕಾದರೆ, ಅದಕ್ಕೆ ಮೂಲ ಕಾರಣ ಸಂಸ್ಕೃತಿಯ ಸಂಸ್ಕಾರದಿಂದ ಬಂದಿರುವಂತಹುದು. 'ವೆಂಕಟಿಗನ ಹೆಂಡತಿ' ಕತೆಯಲ್ಲಿ ದಾಂಪತ್ಯದ ಕಟ್ಟುಪಾಡನ್ನು ಮುರಿದ ಹೆಂಡತಿಯನ್ನು ಉದಾತ್ತವಾಗಿ ಕ್ಷಮಿಸಿ ಮರಳಿ ಕೂಡಿದ ಗಂಡನನ್ನು ಕಾಣುತ್ತೇವೆ. ಅಂದ ಮಾತ್ರಕ್ಕೆ ವೆಂಕಟಿಗನ ಉದಾತ್ತವೆ ಮುರಿದ ಸಂಸಾರಗಳನ್ನು

---

3. ಮಾ.ವೆಂ.ಅಯ್ಯಂಗಾರ್. ಸಣ್ಣಕತೆಗಳು. ಸಂ.೩ (ಎಂ.ಜಿ.ಪಿ.ಕೆ. ಟ್ರಸ್ಟ್, ಬೆಂಗಳೂರು- ೧೯೯೦) ಪು.ಸಂ. ೪೭, ೪೮.

ಒಂದುಗೂಡಿಸುವುದಾದರೂ, ಇದೊಂದೆ ದಾಂಪತ್ಯದ ಸಫಲತೆಯನ್ನು ಸಾಧ್ಯಮಾಡಲಾರದು ಎಂಬ ಎಚ್ಚರವೂ ಈ ಕತೆಯಲ್ಲಿದೆ.

ಕತೆಯಲ್ಲಿ ಕೂಲಿಗರ ವೆಂಕಟಿಗ ದಾರಿತಪ್ಪಿದ ಹೆಂಡತಿ ಹಾಳಾಗಿ ಮತ್ತೆ ಅವನನ್ನೇ ಆಶ್ರಯಿಸಿ ಬಂದಾಗ ಮತ್ತು ತನ್ನೂರಾದ ತಿರುಪತಿಗೆ ಹಿಂದಿರುಗುವುದು ಬೇಡವೆಂದಾಗ "ಅದೇ ದೇವರ ಇಷ್ಟ ಅಂತ ಕಾಣ್ತದೆ. ಊರಿಗೆ ಹೋದರೆ ಹೊಟ್ಟೆ ಹೊರೆಯುವ ನೆಪದಲ್ಲಿ ನನ್ನ ಅಪ್ಪನ ಬೆಟ್ಟವನ್ನು ಹತ್ತಿ ಇಳಿಯಬಹುದಾಗಿತ್ತು. ವಾರದಲ್ಲಿ ತಿಂಗಳಲ್ಲಿ ಅವನ ಮುಖ ತಿಲಕವನ್ನು ನೋಡಬಹುದಾಗಿತ್ತು. ಅವಳಿಗೆ ಅತ್ತ ಹೋಗುವ ಮನಸ್ಸಿಲ್ಲ ಜೊತೆಯ ಜೀವಕ್ಕೆ ಒಲ್ಲದ್ದನ್ನು ನಾನೇಕೆ ಬೇಕು ಎನ್ನಲಿ? ದೂರದಲ್ಲೇ ಇರ್ತೇನೆ, ದೇವರೇ ಎನ್ನುತೇನೆ. ನನ್ನಪ್ಪ ಕಾಪಾಡಿಕೊಳ್ಳುತ್ತಾನೆ". (ವೆಂಕಟಿಗನ ಹೆಂಡತಿ) ಎಂದು ತನ್ನ ಸರಳತನದಲ್ಲೇ ಅತ್ಯುನ್ನತವಾದ ದಾರ್ಶನಿಕತೆಯನ್ನು ಮುಟ್ಟುವುದು ಮಾಸ್ತಿಯವರ ಮನಸ್ಥಿತಿಯಲ್ಲಿಯೇ – ಎಂದು ಸ್ಪಷ್ಟವಾಗುತ್ತದೆ. ಇಷ್ಟೆಲ್ಲಾ ಆದರೂ ವೆಂಕಟಿಗನೇ ಮಾಡದ ಕೆಲಸವನ್ನು ನಿರೂಪಕ ಮಾಡಲು ಮುಂದಾಗುತ್ತಾನೆ. ಆದರೆ ಮಗುವನ್ನು ನೋಡುವ ನೆಪದಲ್ಲಿ ಅದು ವೆಂಕಟಿಗನಂತೆ ಇದೆಯೇ ಎಂದು ನೋಡಲು ಪ್ರಯತ್ನಿಸುತ್ತಾನೆ. ಆದರೆ ವೆಂಕಟಿಗನ ಉದಾತ್ತತೆಯ ಮುಂದೆ ತಾನೆಲ್ಲಿ ಸಣ್ಣವನಾಗಿಬಿಡುತ್ತೇನೋ ಎಂಬ ಭಯದಿಂದ "ಕೈ ಹಿಡಿದ ಗಂಡ ಮಾಡಿದಿರುವ ಪರೀಕ್ಷೆಯನ್ನು ನಾನು ಮಾಡಲಿಯೇಕೆ" ಎಂದು ಸುಮ್ಮನಾಗುತ್ತಾನೆ. ಗಂಡನಾದ ವೆಂಕಟಿಗನೇ ದಾರಿತಪ್ಪಿದ ಹೆಂಡತಿಯನ್ನು ಒಪ್ಪಿಕೊಂಡರೂ, ಲೋಕ ಅದನ್ನು ವಕ್ರ ಕಣ್ಣಿನಿಂದಲೇ ನೋಡುತ್ತದೆ ಎನ್ನುವುದನ್ನು ಕಥೆ ಧ್ವನಿಸುತ್ತದೆ.

- **ಬೀದಿಯಲ್ಲಿ ಹೋಗುವ ನಾರಿ**

ವೇಶ್ಯಾ ಸಮಸ್ಯೆಯು ಬಹು ಪ್ರಾಚೀನವಾದುದು. ಕಾಲಾಂತರದಿಂದಲೂ ಇದು ಸ್ತ್ರೀ ಸಮಾಜವನ್ನು ಶೋಷಣೆಗೆ ಈಡುಮಾಡುತ್ತಲೇ ಬಂದಿರುವುದು. ಅಸಹಾಯಕತೆಯಿಂದಲೋ, ದಾರಿದ್ರ್ಯದಿಂದಲೋ, ಬಲತ್ಕಾರದಿಂದಲೋ ಒಂದು ಸಲ ವೇಶ್ಯೆ ಸಮಸ್ಯೆಯ ಕೂಪಕ್ಕೆ ಬಿದ್ದರೆ; ಮುಂದಿನ ಅವಳ ಸಂತತಿಯೆಲ್ಲವೂ ಅದೇ ಕೂಪಕ್ಕೆ ಆಹುತಿಯಾಗಬೇಕಾದ ಅನಾಹುತವನ್ನು ಸಮಾಜವು ತಂದೊಡ್ಡುತ್ತದೆ. ವೇಶ್ಯಾವೃತ್ತಿ ಮಾಡದೆ ತಮ್ಮ ಬದುಕೇ ನಡೆಯುವುದಿಲ್ಲ ಎನ್ನುವಷ್ಟರಮಟ್ಟಿಗೆ ಅವರಿಗೆ ನಿರ್ಬಂಧವು ಎದುರು ನಿಲ್ಲುತ್ತದೆ. ಇಂಥ ದಾರುಣವಾದ ವೇಶ್ಯಾ ಸಮಸ್ಯೆಯ ಭೀಕರತೆಯನ್ನು ಈ ಕತೆಯು ಹೇಳುತ್ತದೆ. ಈ ಕತೆಯಲ್ಲಿ ಬರುವ ನಾಗರತ್ನಸಾನಿ ವಿವಾಹವಾಗಿ ನಡೆಸಬೇಕಾದ ಜೀವನವನ್ನು ಮೀರಿದ್ದಾಳೆ. ಅಂದರೆ ಲೈಂಗಿಕ ಕಟ್ಟು ಪಾಡನ್ನು ಮೀರಿ ಅವಳು ಜೀವಿಸುತ್ತಿದ್ದಾಳೆ.

'ಬೀದಿಯಲ್ಲಿ ಹೋಗುವ ನಾರಿ' ಕತೆಯು ಪ್ರಾರಂಭದಿಂದ ಕೊನೆಯವರೆಗೂ ಓದುಗರಲ್ಲಿ ಕುತೂಹಲವನ್ನು ಉಂಟುಮಾಡುವ ಒಂದು ವೃತ್ತಾಂತ. ಈ ಕತೆಯು ಪ್ರಾರಂಭವೇ ತುಂಬ ಮನೋಹರ ಆ ನಾರಿ ಬಹು ಸುಂದರಿಯಾಗಿದ್ದಳು. ರೈಲ್ವೆ ಸ್ಟೇಷನ್ನಿನಲ್ಲಿದ್ದವರಲ್ಲಿ ಮುಕ್ಕಾಲು ಪಾಲು ಜನ ಅವಳ ಕಡೆ ನೋಡುತ್ತಿದ್ದರು. ಜನರ ಗುಂಪು ಬಹಳ ಇತ್ತು............ ಈ ಕೋಲಾಹಲದಲ್ಲಿ ಸಿಕ್ಕಿ ಹೆದರಿದವಳಂತೆ ತೋರುತ್ತಿದ್ದಳು. ಹೆದರಿದಂತೆ ತೋರುತ್ತಿದ್ದುದರಿಂದ ಮತ್ತಷ್ಟು ಸುಂದರಿಯಾಗಿ ಕಾಣುತ್ತಿದ್ದಳು.

ಈ ರೀತಿಯ ಸರಳವಾದ ಸ್ವಾಭಾವಿಕವಾದ ವರ್ಣನೆ ಸಾಂಪ್ರದಾಯಕವಾದ ಕಣ್ಣು ಮೂಗು ತುಟಿಗಳ ವರ್ಣನೆಯಿಂದ ಉಂಟಾಗುವ ಅವಳ ಸೌಂದರ್ಯದ ಕಲ್ಪನೆಗಿಂತ ಹತ್ತು ಪಾಲು ಶಕ್ತಿಯುತವಾಗಿದ್ದು ನಮ್ಮ ವಾಹನಾಶಕ್ತಿಗೆ ಸಾಣಿಕೊಟ್ಟು ಆಕೆಯ ಚಲುವನ್ನು ಸುಂದರತರವಾಗಿ ನಮಗೆ ತೋರಿಸುತ್ತದೆ. ಆಕೆ ಅಸಹಾಯಕಳೆಂದು ತಿಳಿದು ಸಹಾಯಮಾಡುವ ಶ್ರೀನಿವಾಸಯ್ಯನ ದುರದ್ದೇಶ ರಹಿತವಾದ ಉದಾತ್ತಮನೋಭಾವ ಮೊದಮೊದಲು ಅಸಹಜವೆಂಬಂತೆ ಕಂಡರೂ, ಕತೆ ಬೆಳೆದಂತೆ ಅದಕ್ಕೆ ಒಂದು ಘನತೆ ಗಾಂಭೀರ್ಯ ಉದ್ಧೇಶ ಲಭ್ಯವಾಗುತ್ತದೆ. ಶ್ರೀನಿವಾಸಯ್ಯನ ಮೃದುಹೃದಯಲ್ಲಿನ ಮನೋಭಾವನೆ ಅವಳಲ್ಲಿನ ಆಂತರ್ಯಗಳನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲವಾಗುತ್ತವೆ. ಆದ್ದರಿಂದಲೇ ಶ್ರೀನಿವಾಸಯ್ಯ ಅವಳನ್ನು ಮಯಿಳೂರಿಗೆ ಕರೆತರುವಷ್ಟು ಸೌಜನ್ಯವನ್ನು ತೋರುವುದು. ಕತೆಯಲ್ಲಿ ಶ್ರೀನಿವಾಸಯ್ಯನ ಶುಚಿತ್ವ, ಆಕೆಯ ಒನಪು ವೈಯಾರಗಳು, ಗೆಣೆಯನ ಲೋಕಸಹಜವಾದ ವಿಕಟತನದ ನಡವಳಿಕೆ ಇವು ತುಂಬಾ ಸ್ವಾಭಾವಿಕವಾಗಿ ವರ್ಣಿತವಾಗಿವೆ.

ಶ್ರೀನಿವಾಸಯ್ಯ ಆಕೆಯನ್ನು ಮಯಿಳೂರಿಗೆ ಕರೆತರಲು ಪಟ್ಟಪಾಡು, ಅನಂತರ ಮಯಿಳೂರಿನಲ್ಲಿ ರೈಲನ್ನು ಇಳಿದು ನೋಡಿದಾಗ ಆಕೆ ಇಲ್ಲದ್ದನ್ನು ನೋಡಿ ಗಾಬರಿಯಾಗುವ ಸನ್ನಿವೇಶ, ಯಾರೋ ಹುಡುಗ ತನ್ನನ್ನು ಹುಡುಕಿಕೊಂಡು ಬಂದ ಸಂದರ್ಭ ಎಲ್ಲವನ್ನು ಗಮನಿಸಿದರೆ ಕತೆ ಯಾವ ತಿರುವನ್ನು ಪಡೆಯುತ್ತದೋ ಅನ್ನುವ ಕುತೂಹಲ ಉಂಟಾಗುತ್ತದೆ. ಕೊನೆಗೆ ರೈಲ್ವೆ ಸ್ಟೇಷನ್ನಿನಲ್ಲಿ ಕಾಣಿಸಿಕೊಂಡ ಆಕೆ ತನ್ನ ತಂದೆಯ ಪ್ರಸಾದದಿಂದ ಜನಿಸಿದವಳು ಎಂದು ಗೊತ್ತಾದಾಗ ಅವಳು ಪತಿತೆಯನ್ನುವ ಭಾವ ತನ್ನಲ್ಲಿಲ್ಲವೆಂದು ಶ್ರೀನಿವಾಸಯ್ಯ ಆಕೆಗೆ ಮುತ್ತು ಕೊಡುತ್ತಾನೆ. ವೇಶ್ಯಾವೃತ್ತಿಯು ನಾಗರತ್ನ ಸಾನಿಗೆ ವಂಶಪಾರಂಪರ್ಯದಿಂದ ಬಂದಿರುವುದನ್ನು ನೋಡಿ ಏನೂ ಮಾಡಲಾಗದೆ ಅಸಹಾಯಕನಾಗುತ್ತಾನೆ. ಆ ವೇಶ್ಯಾಕುಮಾರಿ ಶ್ರೀನಿವಾಸಯ್ಯನ ಮಗಳು ಕಮಲಳನ್ನು ನೆನಪಿಗೆ ತರುತ್ತಾಳೆ. ಇಬ್ಬರಲ್ಲೂ ಒಂದೇ ರೀತಿಯ ಸೌಂದರ್ಯವನ್ನು ನೆನೆದು ಖಿನ್ನನಾಗತ್ತಾನೆ. ಆಗ ಅವನಲ್ಲಿ ಹಲವು ಯೋಚನೆಗಳು ಬಂದು ಕಾಡುತ್ತವೆ. ಮನೆಯಲ್ಲಿರುವ ಮಗಳನ್ನು ಈ ಲೋಕ ಶುದ್ಧ

ಚರಿತ್ರಳೆಂದು ಭಾವಿಸುತ್ತದೆ. ಆದರೆ ಹೊರಗಡೆ ಇರುವ ಆ ವೇಶ್ಯಕುಮಾರಿಯ ಮಗಳನ್ನು ಆ ರೀತಿ ನೋಡಲು ಸಾಧ್ಯವಾ? ಎನ್ನುವ ಯೋಚನೆ ಅವನನ್ನು ಕಾಡುತ್ತದೆ. ಈ ರೀತಿಯ ಭಾವ ಅವನನ್ನು ಮುತ್ತುತ್ತದೆ. ಸರ್ವರಲ್ಲಿಯೂ ತನ್ನ ತಂಗಿ, ಮಗಳ ಚಿತ್ರವನ್ನೇ ಕಾಣುವ ಈ ಉದಾತ್ತ ಮನಸ್ಸು ಶ್ರೀನಿವಾಸರ ಅಗಾಧ ಮಾನವೀಯತೆಯ ಅನುಕಂಪೆಯ ನಿರ್ಮಲ ದೃಷ್ಟಿಯ ಫಲರೂಪವಾಗಿದೆ.

ಎ.ಎನ್. ಮೂರ್ತಿ ರಾವ್ ರವರು 'ಬೀದಿಯಲ್ಲಿ ಹೋಗುವ ನಾರಿ' ಕತೆಯನ್ನು ವಿಮರ್ಶೆ ಮಾಡುತ್ತಾ ಈ ರೀತಿ ಹೇಳುತ್ತಾರೆ. "ಇದು ಸಾತ್ವಿಕನಾದ ಶ್ರೀನಿವಾಸಯ್ಯನನ್ನು ಬಲೆಗೆ ಹಾಕಿಕೊಳ್ಳಲು ಯತ್ನಿಸಿ ವಿಫಲಳಾದ ವೇಶ್ಯೆಯ ಕಥೆ". (ಮಾಸ್ತಿಯರವರ ಕಥೆಗಳು, ಎ.ಎನ್. ಮೂರ್ತಿರಾವ್ ಪು.ಸಂ. ೧೧) ಆದರೆ ನಾಗರತ್ನಸಾನಿಗೆ ಶ್ರೀನಿವಾಸಯ್ಯ ಸಾತ್ವಿಕನೆಂದಾಗಲೀ, ಅವನನ್ನು ಬಲೆಗೆ ಹಾಕಿಕೊಳ್ಳಬೇಕೆಂದಾಗಲೀ ಯೋಚನೆ ಇರುವುದಿಲ್ಲ. ಅವಳ ವೃತ್ತಿಯೇ ವೇಶ್ಯಾವೃತ್ತಿಯಾಗಿರುವುದರಿಂದ ಯಾರಾದರೂ ಬರಬಹುದು ಎನ್ನುವ ನಿರೀಕ್ಷೆಯಲ್ಲಿ ಅವಳಿರುತ್ತಾಳೆ. ಅಂತಹ ಸಂದರ್ಭದಲ್ಲಿ ಶ್ರೀನಿವಾಸಯ್ಯ ಬರುತ್ತಾನೆ. ಇಲ್ಲಿ ಶ್ರೀನಿವಾಸಯ್ಯನ ದೃಷ್ಟಿಕೋನವೇ ಬೇರೆ ನಾಗರತ್ನಸಾನಿಯ ದೃಷ್ಟಿಕೋನವೇ ಬೇರೆ. ಇವರಿಬ್ಬರ ವಿಭಿನ್ನ ದೃಷ್ಟಿಕೋನಗಳು ಗೋಚರವಾಗುವುದು ಕತೆಯ ಕೊನೆಯಲ್ಲಿಯೇ.

ಈ ಕತೆಯನ್ನು ಓದಿದಾಗ ಪ್ರತಿಯೊಬ್ಬರಿಗೂ ಹಲವು ಸಂದೇಹಗಳು ಎದುರಾಗುತ್ತವೆ. ಈಗ ಎ.ಎನ್. ಮೂರ್ತಿರಾಯರ ಸಂದೇಹವನ್ನು ಅವರ ಮಾತುಗಳಲ್ಲೇ ನೋಡಿ;

> "ನನಗೆ ಈ ಕತೆಯನ್ನು ಓದಿದಾಗಲೆಲ್ಲ ಒಂದು ಸಂದೇಹ ಬಂದಿದೆ. ನಾಗರತ್ನಸಾನಿ ಶ್ರೀನಿವಾಸಯ್ಯನನ್ನು "ಅವನೊಬ್ಬ ಹುಚ್ಚ" ಎಂದಳೆ? ಒಂದು ವೇಳೆ ಹಾಗೆ ಅಂದಿದ್ದರೂ ಅಪ್ರತಿಭಳಾದ ಮರುಕ್ಷಣವೇ ಆ ಮಾತಾಡಿದಳೇ? ಅವಳು ಬೀದಿಯಲ್ಲಿ ಹೋಗುವ ನಾರಿಯಾಗಿಯೇ ಉಳಿದಳೆಂಬ ವಿಷಯದಲ್ಲಿ ನನಗೇನೂ ಸಂದೇಹವಿಲ್ಲ. ಕಥೆ ಮುಗಿಯಬೇಕಾದದ್ದು ಹಾಗೆಯೇ, "ಎಂದೋ ಕಂಡ ಯಾವುದೋ ಸೊಗಸಿಗೆ ಎಂದೆಂದಿಗೂ ಮನಸೋಲಬೇಕೆನ್ನುವುದು ಯಾವ ನ್ಯಾಯ?" ಮಾಸ್ತಿಯವರು ಅವಳ ಮನಸ್ಸಿನ ಎರಡು ಭಾವಗಳನ್ನೂ ಗಮನಿಸಿ "ಇದರಲ್ಲಿ ನಿಜವಾದ ಭಾವ ಯಾವುದು ಎನ್ನುವಿರಾ? ಎರಡೂ ನಿಜವಿರಬಾರದೇನು?" ಎಂದು ಕೇಳುತ್ತಾರೆ. ಎರಡೂ ನಿಜವೆಂದು ನಾನೂ ನಂಬಿದ್ದೇನೆ. ಆದರೆ ಮೊದಲನೆಯ ಭಾವಕ್ಕೂ ಎರಡನೆಯದಕ್ಕೂ ನಡುವೆ ಕಾಲದ ಅಂತರ ಕಥೆಯಲ್ಲಿ ಕಾಣುವುದಕ್ಕಿಂತ ಹೆಚ್ಚು ಇದ್ದಿತೆಂದು ತೋರುತ್ತದೆ. ವಿದ್ಯುತ್ ದೀಪವನ್ನು ಆರಿಸುವಂತೆ ಹತ್ತಿಸುವಂತೆ ಅವಳು ಒಂದು ಭಾವವನ್ನು ಆರಿಸಿ ಮತ್ತೊಂದನ್ನು ಹತ್ತಿಸಿರಲಾರಳು. ಒಂದು ಭಾವ ಮಸಕಾಗುತ್ತ ಬಂದು ಇನ್ನೊಂದು ಬಲವಾಗುತ್ತ ಬಂದಿರಬೇಕು. ಇದಕ್ಕೆ ಸ್ವಲ್ಪ ಕಾಲ, ಒಂದೆರಡು ನಿಮಿಷಗಳಾದರೂ, ಬೇಕು. "ಸ್ವಲ್ಪ ಅಪ್ರತಿಭಳಾದಳು" ಎಂಬ

ಮಾತು ಮೊದಲನೆಯ ಭಾವ ಹಠಾತ್ತಾಗಿ ನಂದಿಹೋಗಲಿಲ್ಲ ಎಂಬುದನ್ನು ಸೂಚಿಸುತ್ತಾದರೂ ಅಷ್ಟು ಸಾಲದು ಎನ್ನಿಸುತ್ತದೆ".[4]

ಕತೆಯಲ್ಲಿ ಎಷ್ಟೇ ಸಂದೇಹಗಳು ಎದುರಾದರೂ ಅವುಗಳಿಗೆ ಚಿಂತನೆಯೇ ಪರಿಹಾರಕೊಡಬಲ್ಲದು. ಪ್ರಪಂಚದಲ್ಲಿ ಈ ತರದ ಮುಖವನ್ನು ಕಾಣದ ಶ್ರೀನಿವಾಸಯ್ಯ 'ಈಕೆ ಅಸಹಾಯಳಾದ ಹೆಂಗಸು' ಎಂದುಕೊಂಡು ಅವಳ ಸಹಾಯಕ್ಕೆ ಹೋದ, ಆಮೇಲೆ ತನ್ನ ತಪ್ಪನ್ನು ತಿದ್ದಿಕೊಂಡ ಅವನನ್ನು ಸೆಳೆಯ ಹೊರಟ ನಾಗರತ್ನಸಾನಿಯೂ ತನ್ನ ತಪ್ಪನ್ನು ತಿಳಿದುಕೊಂಡಳು. ನಾಗರತ್ನಸಾನಿಯ ಅನುಭವ ಭಂಡಾರಕ್ಕೆ ಅಂದು ಒಂದು ಹೊಸ ಅಂಶ ಬಂದು ಸೇರಿತು. ಆದರೂ ಅವಳು ವೇಶ್ಯೆಯಾಗಿಯೇ ಉಳಿದಳೆಂಬುದರಲ್ಲಿ ಸಂದೇಹವಿಲ್ಲ ಅವಳ ಜೀವನದಲ್ಲಿ ಮಾರ್ಪಾಟಾದರೆ ಪ್ರಪಂಚದಲ್ಲಿ ಏನು ನಡೆಯುತ್ತದೆ ಎನ್ನುವುದನ್ನು ಮಾಸ್ತಿಯವರು ಮರೆತಿಲ್ಲ.

'ಬೀದಿಯಲ್ಲಿ ಹೋಗುವ ನಾರಿ' ವೇಶ್ಯಾ ಬದುಕನ್ನು ಕುರಿತದ್ದು; ವೇಶ್ಯೆಯನ್ನು ಇಟ್ಟುಕೊಂಡಿದ್ದ ತಂದೆಗೂ ಅವನ ಮಗನಿಗೂ ವ್ಯಕ್ತಿತದಲ್ಲಿ, ಸಂಸ್ಕೃತಿಯಲ್ಲಿ ಎಷ್ಟು ಅಂತರವಿದೆ ಎಂಬುದನ್ನು ಸುಂದರವಾಗಿ ಚಿತ್ರಿಸುತ್ತದೆ. ಈಗಿನ ವೇಶ್ಯೆ (ನಾಗರತ್ನಸಾನಿ) ಹಿಂದಿನ ವೇಶ್ಯೆಯ ಮಗಳು, ಕತೆಯ ಕೊನೆಗೆ ಅವಳಲ್ಲಿ ಬದಲಾವಣೆಯಾದರೂ ತಕ್ಷಣ ಅಪ್ರತಿಭಳಾಗಿ ಮತ್ತೆ ವೇಶ್ಯಾವೃತ್ತಿಯಲ್ಲಿಯೇ ಆಸಕ್ತಗಳಾಗುತ್ತಾಳೆ. ಶ್ರೀನಿವಾಸಯ್ಯನ ಕನಸು ಕನಸಾಗಿಯೇ ಉಳಿದು ಬಿಡುತ್ತದೆ.

### ➢ ಆಂಗ್ಲನೌಕಾ ಕ್ಯಾಪ್ಟನ್

ಮಾಸ್ತಿಯವರ ಕಥೆಗಳಲ್ಲಿ ಕನಿಕರ ಎಲ್ಲರಿಗೂ ಸಲ್ಲುತ್ತದೆಯಾದರೂ ಹೆಣ್ಣಿಗೆ ವಿಶೇಷವಾಗಿ ಸಲ್ಲುತ್ತದೆ. ಹೆಂಗಸು ಎಷ್ಟು ಅಧೋಗತಿಗೆ ಇಳಿಯಬಹುದು ಎಂಬುದಕ್ಕೆ ಉದಾಹರಣೆಯಾಗಿ 'ಕೆಟ್ಟಕಾಲ' ಎಂಬ ಕಥೆಯಲ್ಲಿ ಬರುವ ಸಾಸಿಯಾ ಇದ್ದಾಳೆ. 'ಚೆನ್ನಮ್ಮ' 'ಚಿಕ್ಕವ್ವ' ಮುಂತಾದ ಕಥೆಗಳಲ್ಲಿ ವಿರಸ ದಾಂಪತ್ಯದ ಚಿತ್ರಣವನ್ನು ಕಾಣಬಹುದು. ಆದರೂ ಮಾಸ್ತಿಯವರ ಕಥೆಗಳನ್ನು ಓದಿದಮೇಲೆ ನಮ್ಮ ಮನಸ್ಸಿನಲ್ಲಿ ದಾಂಪತ್ಯ ಜೀವನವು, ಗಂಡು ಹೆಣ್ಣಿನ ಸಹ ಬಾಳ್ವೆಯು, ಅತಿ ಸುಂದರವಾದ ಅನುಭವ, ಅದು ಅವರ್ಣನೀಯವಾದ ಆನಂದವನ್ನು ಕೊಡಬಲ್ಲದು, ಅದು ದೇವರು ಮಾನವನಿಗೆ ಕರುಣಿಸಿರುವ ಅತ್ಯಮೂಲ್ಯವಾದ ವರ ಎಂಬ ಭಾವನೆಯೇ ಕೊನೆಯದಾಗಿ ನಿಲ್ಲುತ್ತದೆ. ದುರಂತ ಪ್ರಣಯ, ಅದು ಮದುವೆಯ ಕಟ್ಟುಪಾಡಿಗೆ ಒಳಪಟ್ಟದ್ದಾಗಲಿ ಅಲ್ಲದಿರಲಿ, ಅವರ ಎದೆಯನ್ನು ಕರಗಿಸುತ್ತದೆ. ವೆಂಕಟಶಾಮಿಯ ಪ್ರಣಯದ ಕಥೆ ಇದಕ್ಕೆ ಉತ್ತಮವಾದ ಉದಾಹರಣೆ. ಆಂಗ್ಲ ನೌಕಾ

---

4. ಎ.ಎನ್. ಮೂರ್ತಿ ರಾವ್: ಮಾಸ್ತಿಯವರ ಸಣ್ಣಕತೆಗಳು, (ಕಾವ್ಯಾಲಯ ಪಬ್ಲಿಕೇಷನ್ಸ್, – ೧೯೯೯). ಪು.ಸಂ.೧೪

ಕ್ಯಾಪ್ಟನ್ನನ ಹೆಂಡತಿ ನೆಲ್‌ಳಂತೆ ಒಂಟಿಯಾಗಿರಲಾರದೆ ಕೆಟ್ಟವರು, ವೆಂಕಟಿಗನ ಹೆಂಡತಿಯಂತೆ ದೊಡ್ಡಸ್ತಿಕೆಗೆ ಮರುಳಾಗಿ ಕೆಟ್ಟವರು, ಹಣಕ್ಕಾಗಿ ದೇಹವನ್ನು ಮಾರಿಕೊಳ್ಳುವ ವೇಶ್ಯೆಯರು – ಎಲ್ಲರಿಗಾಗಿಯೂ ಮಾಸ್ತಿಯವರು ಮರುಗುತ್ತಾರೆ. "ಗಂಡನಿಗೆ ಹೇಗೋ ಹಾಗೆ ಹೆಂಗಸಿಗಾದರೂ ಒಬ್ಬಂಟಿ ಬಾಳು ತುಂಬ ಕಷ್ಟ" ಆ ಹೆಂಗಸು ಋಷ್ಯಾಶ್ರಮದಲ್ಲಿ ಬೆಳದ ಮಾಲಿನಿಯಾಗಲಿ, ಆಂಗ್ಲ ಸಮಾಜದಲ್ಲಿ ಬೆಳದ ನೆಲ್ ಆಗಲಿ, ಅವರನ್ನೆಲ್ಲಾ ಮಾಸ್ತಿಯವರು ನೋಡುವ ದೃಷ್ಟಿ ಮಾತ್ರ ಒಂದೇ.

ಭಾವನೆಗಳಿಗೂ ನೀತಿನಿಯಮಗಳಿಗೂ ಹೋರಾಟ ನಡೆಯುವಂತಹ ವಸ್ತು ಮತ್ತು ಸನ್ನಿವೇಶಗಳನ್ನು ಮಾಸ್ತಿಯವರು ಕಥೆಯಾಗಿ ಆಯ್ದುಕೊಂಡಾಗ ಕೂಡ ಆ ಹೋರಾಟ ಕೇವಲ ಹೋರಾಟವಾಗಿ ಉಳಿಯದೆ, ಕಥೆ ದುರಂತವಾಗದೆ ಕೊನೆಯಾಗುವಂತೆ ಮಾಡುತ್ತಾರೆ. ಇದಕ್ಕೆ 'ಆಂಗ್ಲ ನೌಕಾ ಕ್ಯಾಪ್ಟನ್' ಮತ್ತು 'ವೆಂಕಟಿಗನ ಹೆಂಡತಿ' ಉದಾಹರಣೆಗಳು. ಇವೆರಡೂ ಕಥೆಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಬಗೆಯ ವಸ್ತುವಿದೆ.

'ವೆಂಕಟಿಗನ ಹೆಂಡತಿ' ಕತೆಯಲ್ಲಿ ರಂಗಿ ಶ್ರೀಮಂತನ ದೊಡ್ಡಸ್ಥಿತಿಕೆಯನ್ನು ನೋಡಿ ಲೈಂಗಿಕ ಕಟ್ಟು ಪಾಡನ್ನು ಮೀರುತ್ತಾಳೆ. ಆದರೆ 'ಆಂಗ್ಲ ನೌಕಾಕ್ಯಾಪ್ಟನ್' ಕತೆಯಲ್ಲಿ ನೆಲ್ ಒಂಟಿ ಬಾಳನ್ನು ಬದುಕಲಾರದೆ ಬೇರೆಯವರ ಸಹವಾಸ ಮಾಡುತ್ತಾಳೆ. ಇವೆರಡೂ ಕತೆಗಳನ್ನು ತುಲನೆ ಮಾಡಲು ಹೋದರೆ ಇಂದಿನ ಸಮಾಜದ ದೃಷ್ಟಿಯಲ್ಲಿ ಕ್ಯಾಪ್ಟನ್ ಅಂತಸ್ತು ವೆಂಕಟಿಗನಿಗಿಂತ ಎಷ್ಟೋ ಪಟ್ಟು ಮೇಲಿನದು. ಕ್ಯಾಪ್ಟನ್ ಒಬ್ಬ ವಿದ್ಯಾವಂತ, ತಕ್ಕ ಮಟ್ಟಿಗೆ ದೊಡ್ಡ ಅಧಿಕಾರದಲ್ಲಿರುವವನು, ಸುಸಂಸ್ಕೃತನೂ ಹೌದು. ಭಾರತಕ್ಕೆ ಬಂದ ಆಂಗ್ಲರಲ್ಲಿ ಆಗ ಅಸಾಧಾರಣವಾಗಿ ಕಂಡುಬರುತ್ತಿದ್ದ ಅಹಂಕಾರ, ಭಾರತೀಯರನ್ನೂ ಅವರ ಮತ ಧರ್ಮಗಳನ್ನೂ ತಿರಸ್ಕರಿಸುವ ಮನೋವೃತ್ತಿ ಅವನಲ್ಲಿ ಕಾಣುವುದಿಲ್ಲ. ವೆಂಕಟಿಗನಿಗೆ ಬಂದ ಸಮಸ್ಯೆ ಕ್ಯಾಪ್ಟನ್‌ಗೂ ಬಂತು ಅವನ ಹೆಂಡತಿಯೂ ಬುದ್ಧಿಕೆಟ್ಟ ಘಳಿಗೆಯಲ್ಲಿ ದೇಹದ ಆಸೆ ಮನಸ್ಸನ್ನು ಜಯಿಸಿದ ಘಳಿಗೆಯಲ್ಲಿ ಮತ್ತೊಬ್ಬನನ್ನು ಕೂಡಿದಳು. ಗರ್ಭಿಣಿಯಾದಳು. ಅವಳ ಮನಸ್ಸು ಸೋತದ್ದು ಆ ಘಳಿಗೆ ಮಾತ್ರ ಅವಳ ಹೆಸರು ನೆಲ್, ಹೆರಿಗೆಯ ಆಸ್ಪತ್ರೆಯಿಂದ ಗಂಡನಿಗೆ ಹೇಳಿ ಕಳಿಸಿ ತನ್ನದು ತಪ್ಪು, ವಿವಾಹ ವಿಚ್ಛೇದ ಮಾಡಿಕೊಂಡು ಅವನು ತನಗಿಂತ ಒಳ್ಳೆಯ ಹೆಂಗಸನ್ನು ಮದುವೆಯಾಗಬಹುದೆಂದು ಹೇಳಿ, ಕೊನೆಯ ಮುತ್ತೊಂದನ್ನು ಬೇಡಿದಳು. ಕ್ಯಾಪ್ಟನ್‌ನ ಮನಸ್ಸು ವೆಂಕಟಿಗನದಷ್ಟು ಸರಳವಲ್ಲ ವೆಂಕಟಿಗನಿಗೆ ತನ್ನ ಸ್ಥಾನ ಮಾನಗಳ ಯೋಚನೆ ಬರಲಿಲ್ಲ. ಕ್ಯಾಪ್ಟನ್‌ಗೆ ತಾನು ಇಷ್ಟು ಅಗ್ಗವಾದೆನೇ ಎಂದು ಅವಮಾನವಾದಂತಾಯಿತು. ಆದರೂ ಅವನು ತನ್ನೊಡನೆ ತಾನು ಹೋರಾಡಿ ಗೆದ್ದು ದೊಡ್ಡತನವನ್ನೇ ತೋರಿಸಿದ ಮತ್ತೆ ಎಂದಿನಂತೆ ಹೆಂಡತಿಯೊಡನೆ ಮತ್ತು ಅವಳ ಮಗುವಿನೊಡನೆಬಾಳಿದ.

ವೆಂಕಟಿಗ ಮತ್ತು ಕ್ಯಾಪ್ಟನ್ – ಇವರಿಬ್ಬರಲ್ಲೂ ಯಾರ ನಡತೆ ಹೆಚ್ಚು ಹಿರಿಯದು? ವೆಂಕಟಿಗನ ಮನಸ್ಸಿನಲ್ಲಿ ಯಾವ ಹೊಯ್ದಾಟವೂ ಇಲ್ಲದೆ ಮತ್ತೆ ಬಂದ ಹೆಂಡತಿಯನ್ನು ಸ್ವಾಗತಿಸಿದ. ಕಳೆದು ಹೋಗಿದ್ದ ನಿಧಿಯನ್ನು ಮತ್ತೆ ಪಡೆದವನಂತೆ ಸಂತೋಷಪಟ್ಟ ಅವನಲ್ಲಿ ನಾವು ಕಾಣುವುದು ರೋಷದ ಮತ್ತು ದುಃಖದ ಅಭಾವವನ್ನು ಮಾತ್ರವಲ್ಲ, ಪ್ರೇಮದ ಮತ್ತು ಸಂತೋಷದ ಅಸ್ತಿತ್ವವನ್ನು.

ಕ್ಯಾಪ್ಟನ್‌ಗೆ ತಪ್ಪಿ ನಡೆದ ನೆಲ್‌ಳ ವಿಷಯದಲ್ಲಿ ಕನಿಕರವೇನೋ ಇತ್ತು. ಆದರೂ ತನಗೆ ಅವಮಾನವಾಯಿತು ತಾನು ಅಗ್ಗವಾದೆ ಎಂಬ ಭಾವನೆ ಕನಿಕರಕ್ಕಿಂತ ಆಗ ಹೆಚ್ಚಾಗಿತು. "ಪ್ರೀತಿಯ ನೆನಪಿಗಾಗಿ ಒಂದೇ ಒಂದು ಮುತ್ತು ಕೊಡು" ಎಂದು ನೆಲ್ ಬೇಡಿದಾಗ ಅವನು ಆ ಬೇಡಿಕೆ ಕಿವಿಗೆ ಬೀಳಲಿಲ್ಲ ಎಂಬಂತೆ ನಡೆದುಕೊಂಡ ಏನು ಮಾಡಬೇಕು ಎಂದು ನಿಶ್ಚಯಿಸುವ ಧೈರ್ಯ ಅವನಿಗೆ ಸದ್ಯದ ಪರಿಸ್ಥಿತಿಯಲ್ಲಿ ಹೊಳೆಯಲಿಲ್ಲ. ಅವನಿಗೆ ಅಂತಹ ಸಂದರ್ಭದಲ್ಲಿ ಮತ್ತೊಬ್ಬರ ಸಲಹೆ ಹಾಗೂ ಸೂಚನೆ ಅನಿವಾರ್ಯವಾಯಿತು. ಆದರೆ ಅವನ ಪರವಾಗಿ ಒಂದು ಅಂಶವನ್ನು ಗಮನಿಸಬೇಕು. ಅವನ ವಾತಾವಣರದಲ್ಲಿ ಮಾನಾಪಮಾನಗಳ ಪ್ರಶ್ನೆ, ಕಾಡುತ್ತಿತ್ತು. ಆಂಗ್ಲ ಮೂಲದವನಾಗಿದ್ದುಕೊಂಡು ಅದು ಭಾರತೀಯ ಸಮಾಜದಲ್ಲಿ ಒಂದು ಉನ್ನತ ಪದವಿ ಪಡೆದಿರುವಾತನಿಗೆ ತನ್ನ ಹೆಂಡತಿ ಮಾಡಿರುವ ಕೃತ್ಯದಿಂದ 'ಅಗ್ಗವಾದೆ' ಎಂಬ ಭಾವನೆ ಅವನನ್ನು ಕಾಡಿರಬಹುದು. ಕ್ಯಾಪ್ಟನ್‌ನ ಮನಸ್ಥಿತಿ ವೆಂಕಟಿಗನ ಮನಸ್ಥಿತಿಗಿಂತ ಉನ್ನತ ವಾತಾವರಣದಲ್ಲಿರುವಂತಹುದು. ಕ್ಯಾಪ್ಟನ್ ಬದುಕುತ್ತಿರುವ ಸಾಮಾಜಿಕ ವರ್ಗಕ್ಕೂ, ವೆಂಕಟಿಗನ ಸಾಮಾಜಿಕ ವರ್ಗಕ್ಕೂ, ತುಂಬಾ ವ್ಯತ್ಯಾಸವಿದೆ. ವೆಂಕಟಿಗ ಕೆಳವರ್ಗದವನಾಗಿದ್ದು, ಅವನು ಪ್ರಾರಂಭದಿಂದಲೂ ತನ್ನ ಹೆಂಡತಿಯ ಬಗ್ಗೆ ತುಂಬ ಗೌರವನ್ನು ಇಟ್ಟುಕೊಂಡವನು. ತನ್ನ ಹೆಂಡತಿ ಶ್ರೀಮಂತನ ಜೊತೆ ಹೋದಾಗಲು ವೆಂಕಟಿಗ ಅವಳನ್ನು ಬಯುವುದಿಲ್ಲ. ಬದಲಿಗೆ ನಿನಗೆ ಶ್ರೀಮಂತ ಬೇಡವೆನಿಸಿದಾಗ ನನ್ನಲ್ಲಿಗೆ ಬಂದು ಬಿಡು ಎನ್ನುವ ಮಾತನಾಡುತ್ತಾನೆ. ಅದೂ ಅಲ್ಲದೆ ಅವನು ಆ ಸಮಾಜದಿಂದ ಬಹುದೂರ ಬಂದು ನೆಲಸುತ್ತಾನೆ. ಅವನ ಬದುಕಿನ ಬಗ್ಗೆ ಅಷ್ಟಾಗಿ ತಿಳಿಯುವವರು ಕಡಿಮೆ. ಆದರೆ ಕ್ಯಾಪ್ಟನ್‌ನ ಬದುಕು ಆ ರೀತಿಯದಲ್ಲ. ಅವನು ಇಂಗ್ಲೇಂಡಿನಿಂದ ಭಾರತಕ್ಕೆ ಬಂದು ಜವಾಬ್ದಾರಿಯುತ ಕಾರ್ಯವನ್ನು ನಿರ್ವಹಿಸಲು ಬಂದಂತಹವನು. ಅಂತಹ ವ್ಯಕ್ತಿಯ ಬಗ್ಗೆ ಸಾಮಾನ್ಯವಾಗಿಯೇ ಜನ ಒಂದು ಕಲ್ಪನೆಯನ್ನು ಬೆಳಸಿಕೊಂಡಿರುತ್ತಾರೆ. ಏಕೆಂದರೆ ಅವನು ಅಧಿಕಾರದ ಗದ್ದುಗೆಯಲ್ಲಿರುವವನು. ಅವನನ್ನು ಅನೇಕ ಮಂದಿ ಹಿಂಬಾಲಿಸುತ್ತಿರುತ್ತಾರೆ. ಪರಿಸ್ಥಿತಿ ಹೀಗಿರುವಾಗ ಅವನು ತೆಗೆದುಕೊಳ್ಳುವ ಪ್ರತಿ ನಿರ್ಧಾರವೂ ಬಹಳ ಮಹತ್ವವನ್ನು ಪಡೆಯುತ್ತದೆ. ಕ್ಯಾಪ್ಟನ್ ಒಂದು ಜವಾಬ್ದಾರಿಯುತ ಹುದ್ದೆಯನ್ನು ನಿರ್ವಹಿಸಲು ಹೊರಟಂತ ಸಂದರ್ಭದಲ್ಲಿ

ಅವನ ಹೆಂಡತಿ ನೆಲ್ ಒಬ್ಬಂಟಿಯಾಗಿರಲಾರದೆ ಬೇರೊಬ್ಬನನ್ನು ದೈಹಿಕವಾಗಿ ಕೂಡುತ್ತಾಳೆ. 'ನೆಲ್' ಬೇರೆಯವರೊಂದಿಗೆ ಅಕ್ರಮ ಸಂಬಂಧವನ್ನು ಹೊಂದಿದರೂ ಅವಳ ಬಗ್ಗೆ ಮಾಸ್ತಿಯವರಿಗೆ ಕನಿಕರವಿದೆ. ಏಕೆಂದರೆ ಗಂಡನಾದವನು ಹೆಂಡತಿಯನ್ನು ಬಿಟ್ಟು ವರ್ಷಾನುಗಟ್ಟಲೆ ಬೇರೆಲ್ಲೋ ಇದ್ದರೆ, ಅವಳಿಗೂ ಮಾನವ ಸಹಜವಾದ ಕೆಲವು ಬಯಕೆಗಳನ್ನು ಅನುಭವಿಸಬೇಕೆಂಬ ಚಪಲವಿರುತ್ತದೆ. ಆ ರೀತಿಯ ಚಪಲವನ್ನು ಅನುಭವಿಸಲು ಮುಂದಾದ 'ನೆಲ್' ಸ್ವಾಭಾವಿಕವಾಗಿಯೇ ಗರ್ಭಿಣಿಯಾಗುತ್ತಾಳೆ. ಒಂದು ವೇಳೆ ಗಂಡನಾದವನು ಅವಳೊಂದಿಗೆ ಶಾಶ್ವತವಾಗಿ ಇದ್ದಿದ್ದರೆ ಅವಳೂ ಮತ್ತೊಬ್ಬರೊಂದಿಗೆ ಅನೈತಿಕ ಸಂಬಂಧವನ್ನು ಇಟ್ಟುಕೊಳ್ಳುತ್ತಿರಲಿಲ್ಲ, ಲೈಂಗಿಕ ಕಟ್ಟು ಪಾಡನ್ನು ಮೀರುತ್ತಿರಲಿಲ್ಲ. ಈ ರೀತಿಯ ಯೋಚನೆಗಳು ಮನಸ್ಸಿಗೆ ಬಂದರೆ 'ನೆಲ್' ಅಪರಾಧಿ ಸ್ಥಾನದಲ್ಲಿ ನಿಲ್ಲುವುದೇ ಇಲ್ಲ. ಕ್ಯಾಪ್ಟನ್‌ನ ಉದಾತ್ತತೆಯೂ ಕಾಣೆಯಾಗಿಬಿಡುತ್ತದೆ.

'ಆಂಗ್ಲ ನೌಕಾ ಕ್ಯಾಪ್ಟನ್' ಕಥೆಯನ್ನು ಕುರಿತಂತೆ ಎಚ್.ಜೆ. ಲಕ್ಕಪ್ಪ ಗೌಡರವರ ನಿಲುವು ಈ ರೀತಿ ಇದೆ;

> "ಆಂಗ್ಲ ನೌಕಾ ಕ್ಯಾಪ್ಟನ್ ತನ್ನ ಕೈಕೆಳಗೆ ಶಿಕ್ಷಣ ಪಡೆಯುತ್ತಿದ್ದ ಹತ್ತು ಜನ ಭಾರತೀಯ ಶೂರ ತರುಣರನ್ನು ಅವರ ಅಸಾಧಾರಣ ದೇಶ ಪ್ರೇಮಕ್ಕಾಗಿ ಸಾಹಸಕ್ಕಾಗಿ ಮನಸಾರೆ ಕೊಂಡಾಡುತ್ತಾನೆ. ರೈಲಿನಲ್ಲಿ ಅವನು ವರ್ತಿಸುವ ರೀತಿ, ತನ್ನ ತಂಡದವರ ಬಗ್ಗೆ ಅವನಿಗಿದ್ದ ಪಿತೃವಾತ್ಸಲ್ಯ ಮೊದಲೇ ನಮ್ಮ ಗಮನ ಸೆಳೆಯುತ್ತದೆ. ಆದರೆ ತಾನಿಲ್ಲದಾಗ ತನ್ನ ಪತ್ನಿಯನ್ನು ಶೀಲಭ್ರಷ್ಟಳನ್ನಾಗಿ ಮಾಡಿದುದನ್ನು ಕಂಡೂ, ಕತೆಗಾರರ ಸಲಹೆಯಂತೆ, ಅವಳನ್ನು ಎಂದಿನಂತೆಯೇ ಉದಾರಮನೋಧರ್ಮದಿಂದ ಸಾತ್ವಿಕ ಸಹಾನುಭೂತಿಯಿಂದ ಸ್ವೀಕರಿಸುವ ಆತನ ಹೃದಯದ ಔನತ್ಯ ಅತ್ಯಂತ ಉಚ್ಚಮಟ್ಟದ್ದು. ಕೆಲವೇ ಮಾತುಗಳಲ್ಲಿ ಕ್ಯಾಪ್ಟನ್ ಪತ್ನಿಯ ನಿಷ್ಕಳಂಕವಾದ ಪತಿ ಪ್ರೇಮ ಒಡೆದು ಕಾಣುತ್ತದೆ. ಉನ್ನತ ಆದರ್ಶದ ಅನುಕರಣೀಯ ಸುಂದರ ಚಿತ್ರ ಈ ಕತೆ".[5]

ಈ ಕತೆಯನ್ನು ಓದುವಾಗ ಮಾಸ್ತಿಯವರಿಗಿದ್ದ ಸಾಂಪ್ರದಾಯಕ ಒಲುಮೆಯ ಜೊತೆಗೆ ಸ್ತ್ರೀ ಬಗ್ಗೆ ಅವರಿಗಿದ್ದ ಅಪಾರ ನಂಬಿಕೆಯೂ ಅಭಿವ್ಯಕ್ತಗೊಳ್ಳುತ್ತದೆ. ಈ ಕತೆಯಲ್ಲಿ ಬರುವ 'ನೆಲ್' ಇಂಗ್ಲೇಂಡಿನವಳು. ಅವಳು ಅನೈತಿಕವಾದ ಸಂಬಂಧದಿಂದ ಮಗುವನ್ನು ಸಹ ಪಡೆದಿದ್ದಾಳೆ. ಆದರೆ ಮಾಸ್ತಿಯವರು ಅದನ್ನು ಅನೈತಿಕ ಎಂದು ಕತೆಯಲ್ಲಿ ಚಿತ್ರಿಸಿಲ್ಲ. ಅವಳು ಪರಿಸ್ಥಿತಿ ಅಥವಾ ಸನ್ನಿವೇಶದ ಒತ್ತಡಕ್ಕೆ ಸಿಲುಕಿ ದಾರಿತಪ್ಪುತ್ತಾಳೆಯೇ ವಿನಃ, ತನ್ನ ಗಂಡನಿಗೆ ಮೋಸ ಮಾಡಬೇಕೆನ್ನುವ ಯಾವ ದುರುದ್ದೇಶವೂ ಅವಳಲ್ಲಿ ಇಲ್ಲ ಎನ್ನುವಂತೆ ಚಿತ್ರಿಸುತ್ತಾರೆ. ಅದಕ್ಕೆ 'ನೆಲ್' ಆಡುವ ಮಾತುಗಳನ್ನೇ ಗಮನಿಸಿ;

೫. ಎಚ್.ಜೆ. ಲಕ್ಕಪ್ಪಗೌಡ: ಸಾಹಿತ್ಯ ಬಹುಮುಖಿ ಚಿಂತನೆ (ಶಿ.ಪಿ.ಜಿ.ಪಬ್ಲಿಕೇಷನ್ಸ್ – ೨೦೦೩) ಪು.ಸಂ. ೨೯೦.

"ನಾನು ಎಲ್ಲ ಹೊತ್ತೂ ನಿನ್ನಲ್ಲೆ ಅನುರಕ್ತಳಾಗಿದ್ದೆ, ಆದರೆ ಹೀಗೆಂದು ಫಲವೇನು. ನನ್ನನ್ನು ಒಪ್ಪಿ ಮತ್ತೆ ಕಟ್ಟಿಕೋ ಎಂದು ನಾನು ಹೇಳುತ್ತಿಲ್ಲ. ಚರಿತ ಒಳ್ಳೆಯದಲ್ಲ ಎಂದು ತಿಳಿಸಿ ದಾಂಪತ್ಯ ವಿಚ್ಛೇದನವನ್ನು ಪಡೆದುಕೊ, ನನಗಿಂತ ಒಳ್ಳೆಯ ಹೆಂಗಸನ್ನು ಮದುವೆಯಾಗು....... ಹ್ಯಾರಿ, ಹಿಂದಿನ ಪ್ರೀತಿಯ ನೆನಪಾಗಿ ನನಗೆ ಒಂದೇ ಒಂದು ಮುತ್ತು ಕೊಡು, ಅಷ್ಟು ಮಾಡಿ ಹೊರಟುಬಿಡು, ಈ ದಾಂಪತ್ಯ ಮುಗಿಯಲಿ". (ಸಣ್ಣಕತೆಗಳು ಸಂ. ೪ ಪು.ಸಂ. ೧೩೦-೧೩೧) ಈ ಮಾತುಗಳನ್ನು ಆಲಿಸಿದ ಕ್ಯಾಪ್ಟನ್ ಹ್ಯಾರಿ ಸದ್ಯದ ಪರಿಸ್ಥಿತಿಯಲ್ಲಿ ಏನೂ ಹೇಳಲಾಗದೆ ಹಲವು ಕ್ಷಣ ಮೌನವಾಗುತ್ತಾನೆ. ಅಂದರೆ 'ನೆಲ್'ಳ ಈ ರೀತಿಯ ಅಸಹಾಯಕ ಮಾತುಗಳಿಗೆ ಅವನಲ್ಲಿ ತಕ್ಷಣ ಉತ್ತರಿಸುವ ಧೈರ್ಯವಿರಲಿಲ್ಲ. ಉತ್ತರಿಸಲೂ ಇಲ್ಲ. ಕಥೆಗಾರನು ತುಂಬಿದ ಸ್ಫೂರ್ತಿ ಹಾಗೂ ಧೈರ್ಯ ಕ್ಯಾಪ್ಟನ್ ತನ್ನ ಹೆಂಡತಿಯನ್ನು ಮತ್ತೆ ಕೂಡುವಂತಾಯಿತು. ಒಂದು ವೇಳೆ ಕಥೆಗಾರ 'ನೆಲ್'ಳ ವಿಚಾರವಾಗಿ ಕೆಟ್ಟದಾಗಿ ಹೇಳಿ, ನೀವು ಬೇರೆ ಮದುವೆಯಾಗುವುದೇ ಸರಿ ಎಂದಿದ್ದರೆ ಕಥೆಯು ಬೇರೆಯ ತಿರುವನ್ನು ಪಡೆದುಬಿಡುತ್ತಿತ್ತು. ಆದರೆ ಆ ರೀತಿಯ ಕಲ್ಪನೆ ಮಾಸ್ತಿಯವರಲ್ಲಿ ಮೂಡಿಲ್ಲವಾದ್ದರಿಂದ ಕ್ಯಾಪ್ಟನ್ ಮತ್ತೆ ತನ್ನ ಹೆಂಡತಿಯನ್ನು ಕೂಡುವಂತಾಯಿತು.

ಅಧ್ಯಾಯ : ಐದು

# ಕೌಟುಂಬಿಕ ಹಾಗೂ ಪ್ರಭುತ್ವ ನಿರ್ವಹಣೆಯಲ್ಲಿ 'ಸ್ತ್ರೀ' ಯ ಪಾತ್ರ

- ಮೊಸರಿನ ಮೊಂಗಮ್ಮ
- ಬಾಳಿನ ಚೌಕಾಬಾರ
- ನಿಜಗಲ್ಲಿನ ರಾಣಿ
- ರಾಣಿ ಹಾಟ್‌ಷೇಪ್ ಸಿಟೂ
- ಸಾವಿಯಬ್ಬೆ

## ಕೌಟುಂಬಿಕ ಹಾಗೂ ಪ್ರಭುತ್ವ ನಿರ್ವಹಣೆಯಲ್ಲಿ 'ಸ್ತ್ರೀ'ಯ ಪಾತ್ರ

ಜಗತ್ತಿನಲ್ಲಿ ಪ್ರಮುಖವಾಗಿ ಎರಡು ರೀತಿಯ ಕುಟುಂಬ ವ್ಯವಸ್ಥೆಯನ್ನು ಕಾಣುತ್ತೇವೆ. ಮೊದಲನೆಯದು 'ಪಿತೃಪ್ರಧಾನ' ಕುಟುಂಬ ವ್ಯವಸ್ಥೆ, ಎರಡನೆಯದಾಗಿ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ. 'ಪಿತೃ ಪ್ರಧಾನ' ಕುಟುಂಬ ವ್ಯವಸ್ಥೆಯೇ ಪ್ರಧಾನವಾಗಿರುವ ಭಾರತದಂತಹ ರಾಷ್ಟ್ರದಲ್ಲಿಯೂ, ಕುಟುಂಬ ನಿರ್ವಹಣೆಯಲ್ಲಿ ಪುರುಷನಷ್ಟೇ ಪ್ರಮುಖವಾಗಿ 'ಸ್ತ್ರೀ'ಯು ಸಹ ನಿಲ್ಲುತ್ತಾಳೆ. ಒಂದು ಕಾಲಕ್ಕೆ 'ಸ್ತ್ರೀ'ಯನ್ನು ಪುರುಷನ ಮೋಜಿನ ವಸ್ತು ಎಂದು ತಿಳಿದದ್ದುಂಟು. ಆಕೆಯನ್ನು ಆರ್ಥಿಕ, ಸಾಮಾಜಿಕ, ರಾಜಕೀಯ ಎಲ್ಲಾ ವಲಯಗಳಿಂದ ದೂರದಲ್ಲಿಟ್ಟಿದ್ದರು. ಪರಂಪರಾಗತ 'ಸ್ತ್ರೀ' ಮೌಲ್ಯಗಳು ಎಂದು ಕೋಮಲತೆ, ವಿನಯ, ವಿಧೇಯತೆ, ನಿಗರ್ವ, ಅಸ್ಥಿರತೆ, ಜಡತೆ, ಸಂಗೋಪನಾಶೀಲತೆ, ಭಾವನಾಪ್ರಧಾನತೆ ಮುಂತಾದವುಗಳು 'ಸ್ತ್ರೀತ್ವ' ದ ಲಕ್ಷಣಗಳೆಂದು ಶತಶತಮಾನಗಳಿಂದ ಸಾರುತ್ತಾ ಬಂದಿದ್ದರು. 'ಸ್ತ್ರೀ' ಯು ಎಲ್ಲಾ ವಲಯಗಳಲ್ಲೂ ಪುರುಷನಿಗಿಂತ ಕೀಳೆಂದು ಪರಿಗಣಿಸಲಾಗಿತ್ತು. ಆಕೆಯನ್ನು ವಿದ್ಯಾಜ್ಞಾನದಿಂದ ದೂರವಿಡಲಾಗಿತ್ತು. ಅವಳನ್ನು ಆಟದ ಗೊಂಬೆಯನ್ನಾಗಿ ಮಾತ್ರ ಪುರುಷ ಸಮಾಜ ಪರಿಗಣಿಸುತ್ತಿತ್ತು. ಈ ಎಲ್ಲಾ ಅಸಮಾನತೆಗಳಿಂದ ಕಳಚಿಕೊಂಡು ಹೊರ ಬರಬೇಕಾದರೆ ಅವಳಿಗೆ ಶತಮಾನಗಳೇ ಬೇಕಾಯಿತು.

ರೂಢಿಗತ ಸಂಸ್ಕೃತಿಯ ಸ್ಥಿತ್ಯಂತರದ ಫಲವಾಗಿ ಹುಟ್ಟಿಕೊಂಡ ನವೋದಯ ಸಾಹಿತ್ಯದಲ್ಲಿ ಪ್ರಮುಖ ಲೇಖಕರೆಲ್ಲರೂ ಈ ಸಂಸ್ಕೃತಿಯ ಮೌಲ್ಯ ಬದಲಾಗುವ ಸ್ಥಿತಿಗೆ ಪ್ರತಿಕ್ರಿಯಿಸುವಲ್ಲಿ 'ಸ್ತ್ರೀ'ತ್ವದ ಮಾದರಿಗಳನ್ನು ಬಳಸಿರುವುದನ್ನು ಕಾಣಬಹುದು. ವಸಾಹತು ಸಂಸ್ಕೃತಿಯ ಆಕ್ರಮಣದ ಎದುರಿನಲ್ಲಿ ಪ್ರಾಚೀನ ಮೌಲ್ಯಗಳು ವಿಘಟಿತವಾಗುತ್ತಿರುವುದನ್ನು ಬಹು ಆತಂಕದಿಂದ ಎದುರಲ್ಲಿ ಕಂಡಿರುವ ಮಾಸ್ತಿಯವರ ಕೃತಿಗಳಲ್ಲಿ ಬೇಜವಾಬ್ದಾರಿ, ಅಲೆಮಾರಿ, ಫಲಾಯನವಾದಿ ಪುರುಷರ ಅಸ್ಥಿರತೆಯ ಮಾದರಿಗಳಿಗೆ ಎದುರಾಗಿ, ಹಳೆಯ ಮೌಲ್ಯಗಳನ್ನು ಗಟ್ಟಿಯಾಗಿ ಬಿಂಬಿಸುವಂಥ, ಕುಟುಂಬದ ಎಲ್ಲಾ ಜವಾಬ್ದಾರಿ ಹೊತ್ತು, ನೂರಾರು ಸಂಕಟ ನೋವುಗಳನ್ನು ನುಂಗಿಯೂ ತನ್ನ ಕುಟುಂಬವನ್ನು ಎತ್ತಿ ನಿಲ್ಲಿಸಬಲ್ಲ ಆಧಾರ ಕಂಬಗಳಂತಿರುವ ಸ್ತ್ರೀತ್ವದ ಮಾದರಿಗಳನ್ನು ಕಾಣಬಹುದು. ಪ್ರಾಚೀನ ಕಾಲದಿಂದಲೂ ಸಾಹಿತ್ಯ ರಚನೆಕಾರರು ಸೀತೆ, ದಮಯಂತಿ, ದ್ರೌಪತಿ, ಚಂದ್ರಮತಿಯವರಂಥ ಪುರಾಣ ಸ್ತ್ರೀಯರ ನೂರಾರು ಚರಿತ್ರೆಗಳನ್ನು 'ಸಹಧರ್ಮಿಣಿ', 'ಕುಟುಂಬಿನಿ', ಯರ ಮಾಧರಿಗಳಾಗಿ ಸಹಸ್ರ ವಿಧದಲ್ಲಿ ಚಿತ್ರಿಸಿರುವುದುಂಟು. ಆದರೆ ನಮ್ಮದೇ ಹಳ್ಳಿಯಲ್ಲಿ ಪರಂಪರಾಗತವಾಗಿ ಬೆಳೆದು ಬಂದಿರುವ ಹೆಣ್ಣನ್ನು ಕುರಿತ ಸಾಹಿತ್ಯ ತುಂಬಾ ವಿರಳ. ಮಾಸ್ತಿಯವರು ಸಣ್ಣ ಕತೆಗಳನ್ನು ಬರೆಯಲು ಎಂದು ಪ್ರಾರಂಭಿಸಿದರೋ ಆಂದಿನಿಂದ

ನಮ್ಮದೇ ಹಳ್ಳಿಯಲ್ಲಿ ನಡೆಯುವ ಘಟನೆಗಳನ್ನು ಆಧರಿಸಿ ಕತೆಗಳನ್ನು ರಚಿಸಲು ಪ್ರಾರಂಭಿಸಿದರು. ಮೊಸರಿನ ಮಂಗಮ್ಮ, ಚೆನ್ನಮ್ಮ, ಚಿಕ್ಕವ್ವ, ಸಾವಿತ್ರಮ್ಮ ಹೀಗೆ ನೂರಾರು ಪಾತ್ರಗಳನ್ನು ನಮ್ಮ ಹಳ್ಳಿಗಳಲ್ಲೇ ಕಾಣಬಹುದು. ಆದರೆ ಆ ನಿಟ್ಟಿನಲ್ಲಿ ಯೋಚಿಸಿ ಸಮಾಜದ ಎಲ್ಲಾ ಸ್ತರಗಳಿಂದಲೂ ವಿಷಯವನ್ನು ಆಯ್ದುಕೊಂಡಿದ್ದು, ಮಾಸ್ತಿಯವರೇ ಮೊದಲು.

ಮಾಸ್ತಿಯವರಿಗೆ ಹೆಣ್ಣಿನ ಬಗ್ಗೆ ಅಪರಾದವಾದ ಗೌರವವಿದೆ. ಆದ್ದರಿಂದಲೇ ಅವರ ಕತೆಗಳಲ್ಲಿ ಹೆಣ್ಣು ನೂರಾರು ರೀತಿಯ ವೈವಿಧ್ಯಮಯ ಪಾತ್ರಗಳನ್ನು ಧರಿಸಲು ಸಾಧ್ಯವಾಯಿತು. ಮಾಸ್ತಿಯವರ ಬಹುತೇಕ ಕತೆಗಳಲ್ಲಿ ಹೆಣ್ಣು ಅಧೀನತೆಯಿಂದ ಅಧಿಕಾರದ ನೆಲೆಯತ್ತ ಸಾಗುವ ಸಾಂಸ್ಕೃತಿಕ ಪ್ರಕ್ರಿಯೆಯನ್ನು, ಅಧೀನತೆಯಿಂದ ಸಮಾನತೆಯತ್ತ ಬೆಳೆಯುವ ಪ್ರಕ್ರಿಯೆಯನ್ನೂ ಕಾಣಬಹುದು.

ಹೆಣ್ಣು ಮಾಸ್ತಿಯವರ ದೃಷ್ಟಿಯಲ್ಲಿ ಅಬಲೆಯಲ್ಲ. ಅವಳು ಪ್ರತಿಯೊಂದು ಕ್ಷೇತ್ರವನ್ನೂ ಸಮರ್ಥವಾಗಿ ನಿರ್ವಹಿಸಬಲ್ಲ ಸಬಲೆ. ಕೌಟುಮಬಿಕ ನಿರ್ವಹಣೆಯಿಂದ ಹಿಡಿದು ಪ್ರಭುತ್ವ ಪರಿಪಾಲನೆಯವರಿಗೂ ಅವಳು ಎಲ್ಲವನ್ನೂ ನಿರ್ವಹಿಸಬಲ್ಲಳು. ಪುರುಷನು ಈ ಜಗತ್ತಿನಲ್ಲಿ ಎಷ್ಟು ಸಮರ್ಥನೋ ಮಹಿಳೆಯೂ ಸಹ ಅಷ್ಟೇ ಸಮರ್ಥಳು ಎಂಬುದನ್ನು ಮಾಸ್ತಿಯವರ ಎಷ್ಟೋ ಕತೆಗಳು ನಿದರ್ಶಿಸುತ್ತವೆ. ಹೆಣ್ಣಾದವಳಿಂದ ಒಂದು ಕುಟುಂಬವನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಹೋಗುವ ತಾಳ್ಮೆಯಿದೆ. ಆ ತಾಳ್ಮೆಯ ಜೊತೆಗೆ ಅಧಿಕಾರದ ಗುದ್ದುಗೆಯ ಆಸೆಯೂ ಇದೆ. ಹಾಗೆಯೇ ಒಂದು ರಾಜ್ಯವನ್ನು ಪರಿಪಾಲಿಸುವಲ್ಲಿ ಅವಳಿಗೂ ಶಕ್ತಿಯಿದೆ. ಸಾಮರ್ಥ್ಯವಿದೆ. ಎನ್ನುವುದನ್ನು ಮಾಸ್ತಿಯವರ ಕತೆಗಳೇ ನಿದರ್ಶಿಸುತ್ತವೆ. ಕುಟುಂಬದ ನಿರ್ವಹಣೆಯಾಗಬಹುದು, ರಾಜ್ಯ ಪರಿಪಾಲನೆಯಾಗಬಹುದು, ಎಲ್ಲವನ್ನೂ ಹೆಣ್ಣು ಸಾಧಿಸಬಲ್ಲಳು ಎಂಬುದನ್ನು 'ಮೊಸರಿನ ಮಂಗಮ್ಮ' 'ಬಾಳಿನ ಚೌಕಾಬಾರ', 'ನಿಜಗಲ್ಲಿನ ರಾಣಿ' ಮುಂತಾದ ಕತೆಗಳ ಮೂಲಕ ತಿಳಿಯಬಹುದು. ಆ ನಿಟ್ಟಿನಲ್ಲಿ ಕೆಲವು ಕತೆಗಳನ್ನು ಮುಂದೆ ಪರಿಶೀಲಿಸಲಾಗಿದೆ.

➢ **ಮೊಸರಿನ ಮಂಗಮ್ಮ**

"ಮೊಸರಿನ ಮಂಗಮ್ಮ" ನಮ್ಮದೇ ಹಳ್ಳಿಯ ಕಥೆ, ಕುಟುಂಬದ ಆರ್ಥಿಕ ಜೀವನದ ಮೇಲೆ 'ಸ್ತ್ರೀ'ತನ್ನ ಯಜಮಾನ್ಯ ಸ್ಥಾಪಿಸುವ ರೀತಿಯನ್ನು ಕತೆ ಎತ್ತಿಹಿಡಿಯುತ್ತದೆ. ಈ ಕತೆಯಲ್ಲಿ ಅತ್ತೆ-ಸೊಸೆಯರ ನಡುವೆ ಕುಟುಂಬದ ಯಜಮಾನ್ಯಕ್ಕೆ ನಡೆಯುವ ಶೀತಲ ಸಮರ ಮುಖ್ಯವಾಗುತ್ತದೆ. ಇದು ಕೇವಲ ಅತ್ತೆ-ಸೊಸೆ ಇವರಿಬ್ಬರ ನಡುವಿನ ಸಮಸ್ಯೆಯಲ್ಲ. ಈ ಕತೆಯಲ್ಲಿರುವುದು ತಾಯಿ-ಮಗ-ಮೊಮ್ಮಗ ಸೊಸೆಯರ ಸಮಸ್ಯೆ.

'ಮೊಸರಿನ ಮಂಗಮ್ಮ' ಕಥೆಯಲ್ಲಿ ಪ್ರಾರಂಭದಿಂದಲೇ ಹಳ್ಳಿಗಳ ಕಡೆ ನಡೆಯುವ ಆರ್ಥಿಕ ವಹಿವಾಟಿನ ಸಮಗ್ರಚಿತ್ರಣವಿದೆ. ಹಳ್ಳಿಗಳಲ್ಲಿ ಪ್ರತಿಯೊಂದು ವ್ಯವಹಾರವೂ ವರ್ತನೆಯ ಮುಖಾಂತರ ನಡೆಯುತ್ತಿತ್ತು ಎನ್ನುವುದನ್ನು ಕಥೆಯು ಸೂಕ್ಷ್ಮವಾಗಿ ಮನಗಾಣುವಂತೆ ಮಾಡುತ್ತದೆ. ಪ್ರಸ್ತುತ ಜಗತ್ತಿನಲ್ಲಿ ಪ್ರತಿಯೊಂದು ವ್ಯವಹಾರವೂ ಹಣ ಇಲ್ಲವೆ ದಾಖಲೆಗಳ ಆಧಾರದ ಮೇಲೆ ನಡೆಯುತ್ತದೆ. ಒಂದು ಕಾಲದಲ್ಲಿ ನಂಬಿಕೆಯ ಮೇಲೆ ಎಲ್ಲವೂ ನಿಂತಿತ್ತು. ಎಂಬುದಕ್ಕೆ 'ವರ್ತನೆ'ಯು ವಿಚಾರದಲ್ಲಿಯೇ ಗಮನಿಸಬಹುದಾಗಿದೆ. ಹಳ್ಳಿಗಳಲ್ಲಿ ಸ್ತ್ರೀಯರ ದಿನಚರಿ ಮಾತುಗಳ ಮುಖಾಂತರ ಹೇಗೆ ನಡೆಯುತ್ತಿತ್ತು ಎನ್ನುವುದನ್ನು ಸಹ ಕಥೆಯಲ್ಲಿ ಕಾಣಬಹುದಾಗಿದೆ.

ಮಂಗಮ್ಮ ಮೊಸರು ಮಾರಿ ತನ್ನ ಜೀವನ ಸಾಗಿಸುವಂತಹವಳು. ತನ್ನ ಜೀವಿತಾವಧಿಯಲ್ಲಿ ಕಷ್ಟವನ್ನು ಕಂಡಿದ್ದಾಳೆ, ಅನುಭವವನ್ನೂ ಪಡೆದಿದ್ದಾಳೆ. ಆ ಅನುಭವದಿಂದ ಬುದ್ಧಿಯನ್ನೂ ಕಲಿತಿದ್ದಾಳೆ. ಅನುಭವ ಹಾಗೂ ಬುದ್ಧಿಯಿಂದ ಮಂಗಮ್ಮ ದಾಂಪತ್ಯ ಜೀವನದಲ್ಲಿ ಸುಖವನ್ನೇನೂ ಕಾಣಲಿಲ್ಲವಾದರೂ, ಸಿಗದಿರುವ ದಾಂಪತ್ಯ ಸುಖದ ಬಗ್ಗೆ ಚಿಂತಿಸುತ್ತಲೂ ಇಲ್ಲ. ಆದರೆ ತನ್ನ ಅನುಭವದ ಮೂಲಕವೇ ಗಂಡನ್ನಾದವನನ್ನು ಯಾವ ರೀತಿ ತನ್ನ ಹಿಡಿತದಲ್ಲಿ ಬಂದಿಯನ್ನಾಗಿಸಬಹುದು ಎಂಬುದನ್ನು ಬೇರೆಯವರಿಗೆ ತಿಳಿ ಹೇಳುವವಳಂತಾಗಿದ್ದಾಳೆ. ಮಂಗಮ್ಮ ತನ್ನ ಅನುಭವದ ಮುಖೇನ ಹೇಗೆ ಮಾತನಾಡುತ್ತಾಳೆ ಎನ್ನುವದನ್ನು ಇಲ್ಲಿ ಗಮನಿಸಬಹುದಾಗಿದೆ.

> "ಅವ್ವಾ ಬಂಗಾರದಂತ ಮಗನ್ನ ಹೆತ್ತುಕೊಂಡಿದೀಯಾ. ನಿನ್ನ ಗುಣ ಹೆಂಗೋ ಆ ಮೊಗಾನೂ ಹಂಗೇ ಐತೆ. ಆದರೆ ಇದೆಲ್ಲಾ ಏನವ್ವ? ಹುಡುಗ ಬೆರಳೆಯೋತಂಕಾನೆ. ಬೆಳೆದಮೇಲೆ ಯಾವಳೋ ಬರ್ತಾಳೆ. ಈಗ ಅಮ್ಮ ಅಮ್ಮ ಅಂತ ಇರೋ ಮಗ ಆಗ ಅಮ್ಮನ್ನ ನೀನು ಇದ್ದೀಯಾ ಸತ್ಯಾ ಅಂತ ಕೇಳೊಲ್ಲ" ............. ಅಯ್ಯೋ! ನನ್ನ ತಾಯಿ! ನಾನು ಒಳ್ಳೆ ಶಾಲೆ ಉಡಲಿಲ್ಲ. ಇನ್ಯಾವಳೋ ಉಟ್ಟುಕೊಂಡ್ಲು, ಶಾಲೆಗೆ ಬೆರಗಾಗಿ ಹೋದ ಅವಳ ತಾವ. ಏನೋ ಹೆಂಗಾದರೂ ಇರ್ಲಿ. ನನ್ನ ಮನೆ ನನ್ನ ಹೆಂಡ್ರು ಅಂತ ಗಂಡಸಿರೋದೇ ಚೆಂದ ಅಂತ ನಾನು ಸುಮ್ಮಿಗಿದ್ದೆ. ಆದರೇನವ್ವ, ಅಮೃತ ಮಾರಿದಿನಿ; ಗಂಡನ್ನೀಗಿ ಕೊಂಡಿನಿ. ಏನೋ ನನ್ನ ಪ್ರಾಪ್ತಿ ಆಸೇ ಇತ್ತು ಅವ್ವ ನೀನು ಮಾತ್ರ ನೋಡು, ಗಂಡ ಮನೆಗೆ ಬರೋತ್ತಿಗೆ ಒಳ್ಳೇಶಾಲೆ ಉಟ್ಟುಕೊಂಡು ಓಡಾಡು. ಗಂಸರ ಮನಸ್ಸು ಬಹಳ ಚಪಲತಾಯಿ. ಅವರ ಕಣ್ಣಿಗೆ ಚೆಂದಾಗಿರೋ ಹಂಗೆ ಶಾಲೇನೋ ರವಿಕೇನೋ ಏನಾದರೂ ಒಂದು ಹೆಂಗಸು ಹಾಕಿಕೊಳ್ಳುತಾ ಇರಬೇಕು; ಹೂವು ಗಂಧ ತೋರಿದ್ದನ್ನು ತಕ್ಕೊಂಡು ಅವರ ಮನಸ್ಸಿಗೆ ಸಮಾಧಾನ ಇರೋಹಂಗೆ ಇಟ್ಟುಕೋಬೇಕು ತಾಯಿ. ನೀನು ಈಗ ಉಟ್ಟಿದ್ದೀಯಲ್ಲ ಇಂತಾ ಶಾಲೆ ಏನೋ ಕೆಲಸ ಮಾಡೋವಾಗ, ನಿನ್ನ

ಪಾಡಿಗೆ ನೀನು ಮನೇಗೆ ಇರೋವಾಗ ಆಗಬಹುದು. ಜೈಗಿನ ಹೊತ್ತಿಗೆ ಒಂದು ಒಳ್ಳೇ ಶಾಲೆ ಉಟ್ಟುಕೋಬೇಕು".[1]

ಮಂಗಮ್ಮನ ಈ ಮಾತುಗಳನ್ನು ಗಮನಿಸಿದಾಗ ಪ್ರತಿಯೊಂದು ಮಾತೂ ಅವಳ ಜೀವನದ ಅನುಭವದಿಂದ ಸಾಣೆ ಹಿಡಿದು ಮೂಡಿಬಂದಿರುವಂತಹವು ಎನಿಸುತ್ತದೆ. ಅವಳ ಪ್ರತಿ ಮಾತಿನಲ್ಲೂ ಅವಳು ಪಟ್ಟ ನೋವಿನ ಚಿತ್ರಣವಿದೆ. ಆ ನೋವು ಬೇರೆ ಹೆಣ್ಣಿಗೆ ಬರಬಾರದು ಎನ್ನುವ ಆತಂಕವಿದೆ. ಗಂಡನಾದವನು ಹೆಣ್ಣಿನ ಒಳಮನಸ್ಸನ್ನು ಅರ್ಥ ಮಾಡಿಕೊಳ್ಳುವುದಕ್ಕಿಂತ ಅವಳ ಹೊರ ಸೌಂದರ್ಯವನ್ನು ಮೆಚ್ಚುವಂತಹವನು ಎನ್ನುವ ನಿಲುವಿದೆ. ಅವಳಿಗೆ ತನ್ನ ಗಂಡನ್ನಂತೂ ಹಿಡಿತದಲ್ಲಿಟ್ಟುಕೊಳ್ಳಲಾಗಲಿಲ್ಲ; ಬೇರೆಯವರಾದರೂ ಅವರು ತಮ್ಮ ಗಂಡಂದಿರನ್ನು ಹಿಡತದಲ್ಲಿಟ್ಟುಕೊಳ್ಳಲಿ ಅನ್ನೋ ಆಸೇ ಇದೆ. ಅದಕ್ಕಾಗಿ ಅವಳ ಮನಸ್ಸಿಗೆ ತೋಚಿದ ಕೆಲವು ಉಪಾಗಳನ್ನು ಸೂಚಿಸುತ್ತಿದ್ದಾಳೆ. ಅವಳ ಮಾತುಗಳನ್ನು ಕೇಳಿದವರಿಗೆ ನಗೂ ಬಂದರೂ ಜೀವನದ ಹಾದಿಯಲ್ಲಿ ಆಕೆ ಅನುಭವಿಸಿದಂತಹ ನೋವಿನ ಒಳನೋಟಗಳ ಅರಿವಾಗುತ್ತದೆ.

ಈ ಕತೆಯಲ್ಲಿ ಸರ್ವೇ ಸಾಮಾನ್ಯವಾಗಿ ಹಳ್ಳಿಗಳಲ್ಲಿ ನಡೆಯುವ ದಿನ ನಿತ್ಯದ ಚಿತ್ರಣವಿದೆ. ಕತೆ ಬಹಳ ಮುಖ್ಯವಾಗಿ ಎರಡು ರೀತಿಯ ಒಳನೋಟಗಳನ್ನು ವಿಶದೀಕರಿಸುತ್ತದೆ. ಒಂದೆಡೆ ಮಂಗಮ್ಮ ತಾನಿರುವ ತನಕ ಕುಟುಂಬದ ಯಜಮಾನ್ಯವನ್ನು ಉಳಿಸಿಕೊಳ್ಳಬೇಕೆಂಬ ಹಂಬಲವಿದೆ. ಹಾಗೆಯೇ ಸೊಸೆಗೂ ಸಹ ಅತ್ತೆಯಿಂದ ಆ ಯಜಮಾನ್ಯವನ್ನು ಪಡೆಯಬೇಕೆಂಬ ಮನೋಭಿಲಾಷೆಯಿದೆ. ಈ ಯಾಜಮಾನ್ಯದ ಹಸ್ತಾಂತರದ ವಿಷಯದಲ್ಲಿ ಮಂಗಮ್ಮ ಮತ್ತು ಸೊಸೆಯ ನಡುವೆ ಶೀತಲ ಸಮರ ಏರ್ಪಟ್ಟಿದೆ. ಸೊಸೆ ಮಂಗಮ್ಮನಿಗಿಂತ ಬುದ್ಧಿವಂತೆ. ಅವಳು ಕುಟುಂಬದ ಪರಿಸ್ಥಿತಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಳು. ಅದಕ್ಕಾಗಿ ತನ್ನ ಗಂಡ ಹಾಗೂ ಮಗುವನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳುವಲ್ಲಿ ಯಶಸ್ವಿಯದಳು.

ಮಂಗಮ್ಮನಿಗೆ ತನ್ನ ಕುಟುಂಬದ ಅಧಿಕಾರವನ್ನು ತಾನೇ ಕೊನೆಯವರೆಗೂ ನಿಭಾಯಿಸಬೇಕೆಂಬ ಮನೋಭಿಲಾಷಿಯಿದೆ. ಹೆತ್ತ ತಾಯಿಗಿಂತ ಕಟ್ಟಿಕೊಂಡ ಹೆಂಡತಿಯ ಮಾತಿಗೆ ತಾಳ ಹಾಕುವ ಮಗನ ಮೇಲೆ ಮಂಗಮ್ಮನಿಗೆ ಸಿಟ್ಟಿದೆ. ಮಗ ಅವನಾಗಿಯೇ ತನ್ನ ತಾಯಿಯನ್ನು ಬೇರೆ ಹೋಗು ಎನ್ನಲಿಲ್ಲವಾದರೂ, ಅವನಾಡುವ ಮಾತಿನಿಂದಲೇ ಪೂರ್ವನಿಯೋಜಿತವಾಗಿ ತಾಯಿಯನ್ನು ಬೇರೆ ಹೋಗು ಎನ್ನುವ ನಿಲುವು ಗೊತ್ತಾಗುತ್ತದೆ. ಮಂಗಮ್ಮ ಮತ್ತು ಮಗನ ನಡುವೆ ನಡೆಯುವ ಮಾತಿನ ದಾಟಿಯಲ್ಲೇ ಅದು ಸ್ಪಷ್ಟವಾಗಿಬಿಡುತ್ತದೆ...

೧. ಮಾ.ವೆಂ.ಅಯ್ಯಂಗಾರ್; ಸಣ್ಣಕತೆಗಳು, ಸಂಪುಟ ೨ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೫

"ಏನೋ ಇದು? ಹೆಂಡ್ರು ನಿನ್ಗೆ ಹಾಕಿರೋ ಮಂಕು ಬೂದೀಲಿ ನಿನ್ಗೆ ಅವಳು ಕಂದನ್ನ ಬಡಿದರೂ ಸರಿಯೆ ನನ್ನ ಬೈದರೂ ಸರಿಯೆ ಆಗದೆ. ಚೆನ್ನಾಗಿ ಹೋಯ್ತಪ್ಪ, ನಾಳೆ ಅವಳು ತಾಯೀನ ಆಚೆಗೆ ಕಳಿಸು ಅಂದ್ರೂ ನೀನು ಕಳಿಸೋನೆ' ಅಂದೆ. ಮಗ 'ಇನ್ನೇನು ಮಾಡೊಕಾಗ್ತದವ್ವ, ಹೆಂಡ್ತಿ ಇದ್ರೆ ನಾನಿರೋದಿಲ್ಲ ನಾನಿದ್ರೆ ಹೆಂಡ್ತಿ ಇರೋದು. ಬೇಡ ಅಂದ್ರೆ ದಿಕ್ಕಿಲ್ಲದ ಹೆಂಗ್ಸು ಅವಳ್ನ ಏನು ಮಾಡೋದು? ಅಂದ. 'ನನಗ್ಯಾರಪ್ಪ ದಿಕ್ಕು ಅಂದೆ'. 'ನಿನ್ಗೇನವ್ವ ದನ ಅದೆ, ಕರ ಅದೆ, ದುಡ್ಡು ಅದೆ, ಕಾಸದೆ, ನಿನ್ನ ನಾನು ಸಾಕಬೇಕಾದ್ದೇನು' ಅಂದ, 'ಹಂಗಾದರೆ ನನ್ನ ಬೇರೆ ಹೋಗು ಅಂತಿಯೇನೊ' ಅಂತ ಕೇಳಿದೆ, 'ನಿನ್ನಿಷ್ಟ, ಹೋಗಬೇಕು ಅಂದರೆ ನಾನು ಬ್ಯಾಡ ಅನ್ನೋಲ್ಲ ಅವ್ವ, ನಿಮ್ಮ ಪಂಚಾಯ್ತಿ ಸಾಕು ನನಗೆ......"[2]

ತಾಯಿಯನ್ನು ಮಗ ಬಲವಂತವಾಗಿ ಬೇರೆ ಕಳಿಸಲಿಲ್ಲವಾದರೂ ಅವನ ಮಾತಿನ ಒಳಮರ್ಮವನ್ನರಿತ ಮಂಗಮ್ಮನೇ ಬೇರೆ ಹೋಗಲು ನಿರ್ಧರಿಸುತ್ತಾಳೆ. ಮಗನ ಪ್ರಕಾರ ದನ, ಕರ, ದುಡ್ಡು, ಕಾಸು ಇಷ್ಟಿದ್ದರೆ ಹೇಗಾದರೂ ಬದುಕಬಹುದು ಎನ್ನುವುದು. ಆದರೆ ಮಗ, ಸೊಸೆ-ಮೊಮ್ಮಗ ಇವರನ್ನು ಬಿಟ್ಟು ಬದುಕುವುದು ತಾಯಿಯಾದವಳಿಗೆ ಎಷ್ಟು ಕಷ್ಟಕರ ಎನ್ನುವುದು ಮಗನ ಮನಸ್ಸಿಗಾಗಲೀ, ಸೊಸೆಯ ಮನಸ್ಸಿಗಾಗಲೀ ಗೊತ್ತಿಲ್ಲ. ಅದರ ನೋವು ಗೊತ್ತಾಗುವುದು ತಾಯಿ ಹೃದಕ್ಕೆ ಮಾತ್ರ ಎನ್ನುವ ಸೂಕ್ಷ್ಮ ನಿಲುವನ್ನು ಮಾಸ್ತಿಯವರು ಈ ಕತೆಯಲ್ಲಿ ಹಿಡಿದಿಟ್ಟಿದ್ದಾರೆ. ಮಂಗಮ್ಮ ಬೇರೆ ಹೋದ ಮೇಲೆ ಕತೆ ಹೊಸ ತಿರುವು ಪಡೆದುಕೊಳ್ಳುತ್ತದೆ. ಮಂಗಮ್ಮನಿಗೆ ಬೇರೆ ಹೋಗುವುದಕ್ಕಿಂತ ಮುಂಚೆ ತನ್ನದು, ತನ್ನವರು ಅನ್ನುವ ಏನೇನೋ ಸಂಬಂಧಗಳು ಮನಸ್ಸಿನಲ್ಲಿ ಮನೆಮಾಡಿದ್ದವು. ಅದಕ್ಕೋಸ್ಕರ ಅವಳು ಮೊಸರು ಮಾರಿ ಒಂದಷ್ಟು ದುಡ್ಡು-ಕಾಸು ಇತ್ಯಾದಿ ಇತ್ಯಾದಿ ಕೂಡಿಟ್ಟಿದ್ದಳು. ಆದರೆ ಮಂಗಮ್ಮ ಯಾವಾಗ ಬೇರೆ ಹೋದಳೋ ಅಂದಿನಿಂದ ಅವಳಿಗೆ ಜೀವಿತದಲ್ಲಿ ಇನ್ನು ಮುಂದೆ ಎಲ್ಲರಂತೆ ನಾನು ಇರಬೇಕು ಎನ್ನುವ ಮನೋವಿಭ್ರಮೆ ಬಂದಾಗ ಮೊದಲಿಗೆ 'ಮಕಮಲ್' ಜಾಕೀಟು ಹೊಲಿಸಿಕೊಂಡಳು. ಈ ಹೊಸ ರೀತಿಯ ಬದಲಾವಣೆಯನ್ನು ಗಮನಿಸಿದರೆ ಮಾಸ್ತಿಯವರಲ್ಲಿ ಆಧುನಿಕತೆಯ ಬಗೆಗೆ ಒಲವಿತ್ತಾದರೂ ಅದನ್ನು ವಿರೋಧಿಸುತ್ತಿದ್ದರು ಎನ್ನುವುದು ಗೊತ್ತಾಗುತ್ತದೆ. ಮಂಗಮ್ಮನ ಹೊಸ ಬದಲಾವಣೆಯನ್ನು ಆಧಾರವಾಗಿಟ್ಟುಕೊಂಡೇ ರಂಗಪ್ಪ ಎನ್ನುವವನು ಅವಳಿಂದ ದುರ್ಲಾಬ ಪಡೆಯಲು ಮುಂದಾಗುತ್ತಾನೆ. ಆದರೆ ರಂಗಪ್ಪನ ಮಾತಿಗೆ ಮೋಡಿಗೆ ಮರುಳಾಗದೆ ಮಂಗಮ್ಮ ತೋರುವ ಪ್ರತಿರೋಧ ನಿಜಕ್ಕೂ ಓದುಗರನ್ನು ವಿಸ್ಮಯರನ್ನಾಗಿಸುತ್ತದೆ. ಕತೆ ಹಲವು ಕಾಲ ಘಟ್ಟಗಳಲ್ಲಿ ಹಲವು ತಿರುವುಗಳನ್ನು

2. ಮಾ.ವೆಂ.ಅಯ್ಯಂಗಾರ್: ಸಣ್ಣಕತೆಗಳು, ಸಂಪುಟ ೨ (ಎಂ.ಜೆ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೭

ಪಡೆದುಕೊಂಡು, ಕೊನೆಗೆ ಯಜಮಾನ್ಯಕ್ಕೆ ನಡೆಯುವ ಶೀತಲ ಸಮರದಲ್ಲಿ ಅತ್ತೆ-ಸೊಸೆಯರಿಬ್ಬರೂ ಈ ಸಮರದ ಕೊನೆಯನ್ನು ಊಹಿಸಿ ಒಂದಾಗುವುದರೊಂದಿಗೆ ಕಥೆ ಮುಕ್ತಾಯವಾಗುತ್ತದೆ.

ಮಾಸ್ತಿಯವರ ನಿರುದ್ವಿಗ್ನತೆಗೆ ಅವರು ಬಳಸುವ ತಂತ್ರ ವಿಧಾನವೂ ಅನೇಕ ಕಡೆಗಳಲ್ಲಿ ಪೋಷಕವಾಗಿಯೇ ಇರುತ್ತದೆ. ಎಂದೋ ಎಲ್ಲಿಯೋ ನಡೆದ ಪ್ರಸಂಗವನ್ನು ಯಾರಿಗೋ ಹೇಳುತ್ತಿರುವಂತೆ ಇಲ್ಲವೇ ಯಾರೋ ಹೇಳುತ್ತಿರುವಂತೆ ತಂತ್ರ ಯೋಜನೆ ಇರುತ್ತದೆ. 'ಮೊಸರಿನ ಮಂಗಮ್ಮ'ದ ನಿರೂಪಣಾ ರೀತಿಯೂ ಈ ಬಗೆಯ ತಂತ್ರಗಳ ಒಂದು ಮಾದರಿ. ಇಲ್ಲಿ ಮಾಸ್ತಿಯವರಿಗೆ ಅವರ ಕಥೆಗಳಿಗೆ ಸಾಮಾನ್ಯವಾದ ಪುಷ್ಟವಾದ ಕಥೆಯನ್ನು ಹೇಳುವ ಆತುರವಿಲ್ಲ. ಪರಂಪರಾಗತ ಮೌಲ್ಯಗಳನ್ನು ಕೀರ್ತಿಸುವ ಹಂಬಲವೂ ಮುಖ್ಯವಾಗಿಲ್ಲ. ವಿಶಿಷ್ಟ ಕೌಟುಂಬಿಕ ಮತ್ತು ಸಾಮಾಜಿಕ ಸಂದರ್ಭದ ಒಂದು ಪರಿಸ್ಥಿತಿಯಲ್ಲಿ ಹುಟ್ಟಿಕೊಳ್ಳುವ ಅನುಭವದ ಪದರ ಪದರಗಳನ್ನು ವಿಸ್ಮಯದ ಸ್ಥಾಯಿಯಲ್ಲಿ ಬಿಚ್ಚುತ್ತಲೇ ಅರ್ಥಛಾಯೆಗಳನ್ನು ಸದ್ದಿಲ್ಲದೆ ಧ್ವನಿಸುವ ಪ್ರಕ್ರಿಯೆ ಇಲ್ಲಿನದು. ಕಥೆಯನ್ನು ನಿರೂಪಿಸುವವಳು ಪಾತ್ರವೂ ಹೌದು: ಕಥೆಯ ಆಶಯವನ್ನು ಹಿಡಿದುಕೊಡುವ ಕಥೆಗಾರನ ಪ್ರಜ್ಞೆಯ ಅವಿಭಾಜ್ಯ ಅಂಗವೂ ಹೌದು. ಶಿಷ್ಟ ಮಧ್ಯಮ ವರ್ಗದ ಗೃಹಣಿಯಾದ ಆಕೆ ಕೊನೆಯಲ್ಲಿ ಮಾಡುವ ತಾತ್ವಿಕ ವ್ಯಾಖ್ಯಾನ ಆ ಪಾತ್ರದ ಸಂದರ್ಭದಲ್ಲಿ ಅಷ್ಟೇನೂ ಕೃತಕ, ಅಸಹಜ ಎಂಬಂತೆನಿಸದಿದ್ದರೂ ಕಥೆಗಾರನ ದನಿಯೂ ಸಂಪೂರ್ಣವಾಗಿ ಅದರೊಂದಿಗೆ ಸೇರಿಹೋಗುವ ರೀತಿಯ ಸಂವಿಧಾನ ವ್ಯವಸ್ಥೆ ಇರುವುದರಿಂದ ಸರಳಗೊಳ್ಳುತ್ತದೆ. ಮಾಸ್ತಿ ತಾತ್ವಿಕ ನಿಲುವು ತಳೆಯಲು ಹವಣಿಸಿದಾಗಲೆಲ್ಲ ಅದಕ್ಕೆ ತಕ್ಕ ಪ್ರಮಾಣದ ಬೌದ್ಧಿಕ ದ್ರವ್ಯ ಸೇರಿಕೊಳ್ಳುವುದರಿಂದ ಹುಸಿಯಾಗುತ್ತದೆ. ಇಷ್ಟಾದರೂ ಈ ಕಥೆಯಲ್ಲಿ ನಿರೂಪಿತವಾಗಿರುವ ಸಂಗತಿಗಳನ್ನು ಕಥೆಯ ಸಂದರ್ಭದಲ್ಲಿ ತೀರಾ ಸಹಜವೆಂಬಂತೆ ಉತ್ತರಿಸುತ್ತಲೇ ಒಂದು ಸಂಗತಿಗೂ ಇನ್ನೊಂದು ಸಂಗತಿಗೂ ಒಳಸಂಬಂಧಗಳನ್ನು ನವುರಾಗಿ ಏರ್ಪಡಿಸಿ ಅವುಗಳ ಅರ್ಥ ಸಂಪತ್ತಿಯನ್ನು ಹೆಚ್ಚಿಸುತ್ತ ಕಥೆ ಕಟ್ಟುವಲ್ಲಿ ಕಾಣುವ ಸೂಕ್ಷ್ಮ ಕುಸುರಿ ಅತ್ಯುತ್ತಮ ಮಟ್ಟದ್ದಾಗಿದೆ.

- **ಬಾಳಿನ ಚೌಕಾಬಾರ**

'ಬಾಳಿನ ಚೌಕಾಬಾರ' ಈ ಕತೆ ನನ್ನ ದೃಷ್ಟಿಯಲ್ಲಿ ಮಾಸ್ತಿಯವರ ಅತ್ಯುತ್ತಮ ಕಥೆಗಳ ಸಾಲಿನಲ್ಲಿ ನಿಲ್ಲುವಂತಹದು. ಕಥೆಯ ಹೆಸರೇ ಸೂಚಿಸುವಂತೆ ಬಾಳಿನ ಅನೇಕ ಮಜಲುಗಳನ್ನು ಪರಿಚಯಿಸುವಲ್ಲಿ ಕಥೆ ಯಶಸ್ವಿಯಾಗಿದೆ. ಜಿ.ಎಚ್. ನಾಯಕ್ ಕನ್ನಡ ಸಣ್ಣಕಥೆಗಳನ್ನು ಸಂಪಾದಿಸಿ ಅವುಗಳಿಗೆ ಪ್ರಸ್ತಾವನೆ ಬರೆಯುವ ಸಂದರ್ಭದಲ್ಲಿ ಈ ರೀತಿ ಹೇಳುತ್ತಾರೆ; "ಸಮಾಜಿಕ ಸಭ್ಯತೆ, ಸೌಜನ್ಯಗಳ ಚೌಕಟ್ಟಿನಲ್ಲಿಯೇ ಅಪೇಕ್ಷಿತ ಪರಿಣಾಮ

ರಮಣೀಯತೆಯನ್ನು ನವೋದಯದವರು ಸಾಧಿಸುತ್ತಾರೆ. ಸಾಮಾಜಿಕವಾಗಿ ಒಪ್ಪಿತವಾದ ಮೌಲ್ಯ ಆದರ್ಶಗಳ ಬಗೆಗೆ ಶ್ರದ್ಧೆಯನ್ನು ಬಲಗೊಳಿಸುವುದು ಅವರ ಆಶಯವಗಿರುವುದೇ ಇದಕ್ಕೆ ಕಾರಣ" ಎಂದು. ಈ ದೃಷ್ಠಿಕೋನದಿಂದ ಮಾಸ್ತಿಯವರ ಹಲವು ಕಥೆಗಳನ್ನು ಅರ್ಥಮಾಡಿಕೊಳ್ಳುವುದು ಸೂಕ್ತ ಎನಿಸುತ್ತದೆ. ನವೋದಯ ಸಂದರ್ಭದಲ್ಲಿ ವಿದ್ಯೆ, ಮತಿ ಹಾಗೂ ದೇವರ ಅಸ್ತಿತ್ವ, ಮುಂತಾದ ವಿಷಯಗಳಿಗೆ ವಿಶೇಷ ಒತ್ತು ನೀಡಲಾಗಿತ್ತು. ಎನ್ನುವುದನ್ನು ಆ ಕಾಲಘಟ್ಟದಲ್ಲಿ ರಚನೆಯಾದ ಹಲವು ಕೃತಿಗಳು ಸ್ಪಷ್ಟಪಡಿಸುತ್ತವೆ.

ಬಾಳಿನಲ್ಲಿ ವಿದ್ಯೆಯೆನ್ನುವುದು ಉನ್ನತವಾದ ಮಟ್ಟವನ್ನು ಮುಟ್ಟಿಸಬಲ್ಲದು ಎನ್ನುವ ನಿಲುವನ್ನು ಮಾಸ್ತಿಯವರಲ್ಲಿ ಕಾಣಬಹುದು. ಅಂತಹ ದೃಷ್ಟಿಕೋನವನ್ನು 'ಬಾಳಿನ ಚೌಕಾಬಾರ' ಎನ್ನುವ ಕತೆ ನೀಡಬಲ್ಲುದಾಗಿದೆ. ಸಮಾಜದಲ್ಲಿ ಸರ್ವೇಸಾಮಾನ್ಯವಾಗಿ ಅದೂ ಮದುವೆಯ ಸಂದರ್ಭದಲ್ಲಿ ತೆಗೆದುಕೊಳ್ಳುವ ತೀರ್ಮಾನಗಳು ಅವರ ಬದುಕನ್ನು ಅವಲಂಬಿಸಿರುತ್ತದೆ. ಮುಗ್ದ ಹೆಣ್ಣು ಮಗಳಿಗೆ ಮದುವೆಯೆಂಬ ಮಾತು ಬಂದಾಗ ಹಲವು ಬಗೆಯಾಗಿ ಚಿಂತಿಸುವುದು ಸಾಮಾನ್ಯ ವಿಷಯವೇ. ಹಾಗೆಯೇ ಸದ್ಯಕ್ಕೆ ಸ್ಥಿತಿವಂತರಾಗಿರುವ (ಮನೆತನದ ದೃಷ್ಠಿಯಲ್ಲಿ, ರೂಪದಲ್ಲಿ, ಹಣಕಾಸಿನ ವಿಷಯದಲ್ಲಿ ಇತ್ಯಾದಿ) ಸುಂದರ ಯುವಕರನ್ನೇ ವರಿಸುವುದು ಅಂದಿನ ಕಾಲದಿಂದ ಇಂದಿನವರೆಗೂ ಮುಂದುವರೆದಿದೆ. 'ಬಾಳಿನ ಚೌಕಾಬಾರ' ಕಥೆಯಲ್ಲಿ ನಿರೂಪಣೆಯ ತಂತ್ರ ಅದ್ಭುತವಾಗಿದೆ. ಅಜ್ಜಿಯಾದವಳು ತನ್ನ ಅನುಭವಗಳ ಬಾಳ ಬುತ್ತಿಯನ್ನು ಎಳೆ ಎಳೆಯಾಗಿ ಬಿಚ್ಚಿಡುವುದರೊಂದಿಗೆ ಮತ್ತೊಬ್ಬರ ಜೀವನದ ಹಾದಿಯನ್ನು ಸುಖಾಂತಗೊಳಿಸುವಲ್ಲಿ ಸಫಲವಾಗುತ್ತಾಳೆ. ಅಜ್ಜಿ (ಕಥೆಯ ಮುಖ್ಯ ನಿರೂಪಣಾ ಪಾತ್ರ) ತನ್ನ ವೃತ್ತಾಂತವನ್ನು ಹೇಳುವ ರೀತಿಯನ್ನು ಗಮನಿಸಿದಾಗ; ಅಜ್ಜಿ ಪ್ರಾಯದ ಸಂದರ್ಭದಲ್ಲಿ ವಿದ್ಯೆಬಲ್ಲವನಿಗಿಂತ ರೂಪವಂತನಾಗಿದ್ದ ಹಾಡುಗಾರನನ್ನು ವರಿಸುತ್ತಾಳೆ. ಅದರ ಪರಿಣಾಮವಾಗಿ ಆ ರೂಪವಂತ ಯುವಕ ತನ್ನ ಸಹಚರ ಹಾಡುಗಾತಿಯರ ಸಹವಾಸದಿಂದ ರೋಗಗ್ರಸ್ಥನಾಗುತ್ತಾನೆ. ಕೊನೆಗೆ ಅವನು ಅನಾರೋಗ್ಯದ ಕಾರಣವಾಗಿ ಮಧ್ಯವಯಸ್ಸಿನಲ್ಲಿಯೇ ಸಾವಿಗೆ ಶರಣಾಗುತ್ತಾನೆ. ಮದುವೆಯ ಸಂದರ್ಭದಲ್ಲಿ ಆಕೆ ತೆಗೆದುಕೊಂಡ ತೀರ್ಮಾನ ಬಾಳನ್ನೇ ಅಂಧಕಾರದಲ್ಲಿ ಮುಳುಗಿಸಿಬಿಡುತ್ತದೆ.

ಈ ಕಥೆಯಲ್ಲಿ ವಿಶೇಷವಾಗಿ ವಿವಾಹಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಣೆಯನ್ನು ನೀಡುವಂತಿದೆ. ಮಾಸ್ತಿಯವರು ಸಂಪ್ರದಾಯಸ್ತರಾದ್ದರಿಂದ ಎಲ್ಲೋ ಒಂದು ಕಡೆ ಜಾತಕದ ವಿಷಯಕ್ಕೆ ಹೆಚ್ಚಿನ ಪ್ರಾಮುಖ್ಯವನ್ನು ನೀಡುವಂತವರಾಗಿದ್ದಾರೆ ಎನಿಸುತ್ತದೆ. ಜಾತಕ ಕೂಡಿಬಂದವನ ಜೊತೆ ವಿವಾಹವಾಗದಿದ್ದೇ ಆಕೆಯು ಮದ್ಯವಯಸ್ಸಿನಲ್ಲಿ ವಿಧವೆಯಾಗಲು ಮುಖ್ಯ ಕಾರಣ ಎನ್ನುವುದು ಕಥೆಯಿಂದಲೇ ಗೊತ್ತಾಗುತ್ತದೆ. ಆದರೆ

ಕಥೆಯಲ್ಲಿ ಇದಕ್ಕೆ ಅತಿ ಹೆಚ್ಚಿನ ಪ್ರಾಮುಖ್ಯ ನೀಡಿಲ್ಲವಾದರೂ ಓದುಗರ ಗಮನಕ್ಕೆ ಗೊತ್ತಾಗುತ್ತದೆ. ಕಥೆಯ ಮುಖ್ಯ ಆಶಯವೆಂದರೆ, ವಿದ್ಯಾವಂತನಾಗಿದ್ದು ರೂಪದಲ್ಲಿ ತಕ್ಕಮಟ್ಟವನಾಗಿದ್ದವನನ್ನು ಒಪ್ಪಿಕೊಳ್ಳದೆ ಸದ್ಯಕ್ಕೆ ಸ್ಥಿತಿವಂತನಾಗಿರುವ, ರೂಪವಂತನಾಗಿರುವನನ್ನು ಹಿಂದು ಮುಂದು ಯೋಚಿಸದೆ ಮದುವೆಗೆ ಆಕೆ ಒಪ್ಪಿಬಿಡುತ್ತಾಳೆ. ಅನಂತರ ಕಾಲವೇ ಎಲ್ಲವನ್ನು ನಿರ್ಧರಿಸುತ್ತದೆ. ಆಕೆಯ ಗಂಡನಾದವನು ಹಾಡಾಡುವುದರಲ್ಲಿ ಪರಿಣಿತನಾದ್ದರಿಂದ ಇತರೆ ಹಾಡುಗಾರ್ತಿಯರೊಂದಿಗೆ ಅನೈತಿಕ ಸಂಬಂಧದಿಂದಾಗಿ ಇಡೀ ಜೀವನವನ್ನೇ ಹಾಳುಮಾಡಿಕೊಳ್ಳುತ್ತಾನೆ. ಇಷ್ಟಾದರೂ ಮದುವೆಯ ಸಂದರ್ಭದಲ್ಲಿ ತಿರಸ್ಕೃತನಾಗಿದ್ದ ಮಳವಳ್ಳಿ ಹುಡಗ ತನ್ನ ವಿದ್ಯಾಭ್ಯಾಸ ಹಾಗೂ ಅವಿರತ ಶ್ರಮದಿಂದಾಗಿ ವೈದ್ಯನಾಗುತ್ತಾನೆ. ಜೊತೆಗೆ ಅವನಲ್ಲಿ ಒಳ್ಳೆಯ ಗುಣಗಳು ಸಹ ಅಂತರ್ಗತವಾಗಿರುತ್ತವೆ.

ತನ್ನನ್ನು ತಿರಸ್ಕರಿಸಿದ ಆಕೆಯ ಗಂಡನಿಗೆ ಸುಶ್ರೂಷೆ ಮಾಡುವಲ್ಲಿ ಆತ ತೋರಿಸುವ ಔದಾರ್ಯ ಮೆಚ್ಚುವಂತಹುದು. ಆಕೆ, ಆಕೆಯಗಂಡ ಹಾಗೂ ಮೊಮ್ಮಗ ಮೂವರನ್ನು ರೋಗದಿಂದ ಮುಕ್ತರನ್ನಾಗಿಸಿದ ಮಳವಳ್ಳಿ ಡಾಕ್ಟರರ ಕಾರ್ಯದಕ್ಷತೆಯನ್ನು ಕತೆಯಲ್ಲಿ ಸಂದರ್ಭೋಚಿತವಾಗಿ ನೀಡಲಾಗಿದೆ. ರೂಪದಲ್ಲಿ ಹಾಡುಗಾರನಿಗಿಂತ ಚೆನ್ನವಿಲ್ಲ ಅನ್ನೋ ಒಂದೇ ಕಾರಣಕ್ಕೆ ವಿದ್ಯಾವಂತನಾದ ತರುಣನನ್ನು ತಿರಸ್ಕರಿಸಿದ್ದರಿಂದ ಆಕೆ ಜೀವನದಲ್ಲಿ ಅನುಭವವಿಸಿದ ನೋವಿನ ಕ್ಷಣಗಳನ್ನು ಬಿಚ್ಚಿಡುತ್ತಾಳೆ. ಅಲ್ಲದೇ ಆಕೆ ತಿರಸ್ಕರಿಸಿದರೂ ಮಳವಳ್ಳಿ ವೈದ್ಯನಿಗೆ ಆಕೆಗಿಂತ ಸುಂದರ ಯುವತಿ ದೊರಕಿರುವುದನ್ನು ಗಮನಿಸಿ ತೃಪ್ತಳಾಗುತ್ತಾಳೆ. ತಾನಿರಬೇಕಾದ ಸ್ಥಾನದಲ್ಲಿ ಬೇರೊಬ್ಬಳು ಇರುವುದು ಅವಳ ಮನಸ್ಸಿನಲ್ಲಿ ಚಿಂತನೆ ಮೂಡಿದರೂ ಸದ್ಯಕ್ಕೆ ಎಲ್ಲವೂ ಮುಗಿದುಹೋಗಿರುವ ಅಧ್ಯಾಯವಾಗಿದೆ. ಸದ್ಯಕ್ಕೆ ತಾನು ಕಳೆದುಕೊಂಡ ಭಾಗ್ಯ ಮತ್ತೊಬ್ಬಳಾದರೂ ಅನುಭವಿಸುತ್ತಿದ್ದಾಳಲ್ಲ ಅನ್ನೋ ಸಂತೋಷ ಮಾತ್ರ ಅವಳದಾಗುತ್ತದೆ.

129801

ಮಾಸ್ತಿಯವರಿಗೆ ದೇವರಲ್ಲಿ ಅಪಾರ ಭಕ್ತಿ ಇತ್ತೆಂಬುದನ್ನು ಈ ಕತೆ ಸ್ಪಷ್ಟಪಡಿಸುತ್ತದೆ. ಅಜ್ಜಿ ತನ್ನ ಜೀವನದಲ್ಲಿ ಅನುಭವಿಸಿದ ಘಟನೆಗಳನ್ನು ವಿವರಿಸುತ್ತ ಬಾಳಿನಲ್ಲಿ ಹೇಗೆ ತೀರ್ಮಾನಗಳನ್ನು ತೆಗೆದುಕೊಳ್ಳಬೇಕು ಎನ್ನುವುದನ್ನು ತಿಳಿಯಪಡಿಸಿದರೂ, ಕೊನೆಗೆ ಇದೆಲ್ಲಾ ದೇವರ ಆಟವೆಂಬಂತೆ ಚಿತ್ರವಾಗಿದೆ. ಕಥೆಯಲ್ಲಿ ಅಜ್ಜಿಯದೇ ಮುಖ್ಯ ನಿರೂಪಣಾ ಪಾತ್ರವಾಗಿದ್ದರೂ ಸಹ ಮಾಸ್ತಿಯವರ ದೈವಪ್ರಜ್ಞೆಯನ್ನು ಗಮನಿಸಬಹುದಾಗಿದೆ. ಕಥೆಯಲ್ಲಿ ನಿರೂಪಿತವಾಗಿರುವ ಅಜ್ಜಿಯ ಅನುಭವದ ಮಾತುಗಳು ಈ ರೀತಿ ಮೂಡಿಬಂದಿವೆ:

> "ಮದುವೆಗೆ ನೋಡೋಕೆ ಬಂದು ಒಲ್ಲೆ ಅನ್ನಿಸಿಕೊಂಡ ಹುಡುಗ ಆಮೇಲೆ ನನ್ನ ಬಾಳಿನಲ್ಲಿ ದೊಡ್ಡವನಾಗಿ ಮೂರು ಸಲ ಬಂದು ನನ್ನ ಗಂಡನ್ನ ಕಾಪಾಡಿದರು. ನನ್ನನ್ನು ಕಾಪಾಡಿದರು. ನನ್ನ ಮೊಮ್ಮಗನ ಕಾಪಾಡಿದರು. ಇದನ್ನು ನಾನು, ತನ್ನಿಚ್ಛೆಯಿಂದ ನಡೆಯಿತು

ಅನ್ನೋದೆ, ಅಪ್ಪಾ? ಅದೂ ಇರಬಹುದು, ಆ ದಿನ ನನಗೆ ತೋರೋದು ಹೀಗೆ. ನಾನು, ಇವನು ಬೇಡ ಇನ್ನೊಬ್ಬ ಇರಲಿ ಅಂತ ಗಂಡನ್ನ ವರಿಸಿದೆ. ಅಪ್ಪನ ಮಾತು ಕೇಳಿದ್ದರೆ ಇವನ ಹೆಂಡತಿಯಾಗಿ ಇರತಾ ಇದ್ದೆ. ದೇವರು ನೀನು ನಡೆಕೊಂಡದ್ದು ಜಾಣು ಆಯಿತೆ ಅಂತ ಕೇಳೋದಕ್ಕೆ ಇವರನ್ನ ಈ ಮೂರು ಸಲ ನನ್ನ ಬಾಳಿನಲ್ಲಿ ಆಮೇಲೆ ಹತ್ತಿರ ಕರೆತಂದರು ಅಂತ ಅನ್ನಿಸುತ್ತದೆ. ಅಲ್ಲ ಅಂತ ಹ್ಯಾಗೆ ಅನ್ನೋದು? ಎಲ್ಲರ ಬಾಳಿನಲ್ಲಿ ಇಂಥ ವಿಚಿತ್ರ ಕಾಣುತ್ತೆ ಅಥವಾ ನಡೆಯುತ್ತೆ ಅಂತ ಅಲ್ಲ. ಒಂದು ಬಾಳಿನಲ್ಲಿ ಕಂಡಾಗ, ಇರಬಹುದು ಅನ್ನೋದೆ ಸರಿ. ಹಿರಿಯರು ಹೇಳಿದ್ದಾರೆ. ನಮಗೆ ಮುಂದೆ ಆಗುತ್ತೆ ಅನ್ನೋ ಸಂಗತಿ ದೇವರ ಮನಸ್ಸಿನಲ್ಲಿ ಆಗಿ ಮುಗಿದಿದೆ. ಅದನ್ನ ತಪ್ಪಿಸೋರು ಯಾರು? ಯಾವ ಮಾತಿನಲ್ಲೂ ಏನು ಮಾಡೋಣ ಅಂತ ನಾವು ಬಹಳ ಚಿಂತೆ ಮಾಡಿ ಪ್ರಯೋಜನ ಇಲ್ಲ. ನೀನು ಸರಿಯಾದ ಪ್ರೇರಣೆ ಕೊಡು ಅಂತ ದೇವರನ್ನ ಕೇಳಿಕೋಬೇಕು. ಬಂದ ಪ್ರೇರಣೆಯಂತೆ ನಡೀಬೇಕು. ನಮ್ಮ ಬದುಕು ಚೌಕಾಬಾರದ ಆಟ. ದಾಳ ನಾವು ಹಾಕತೇವೆ. ಗರ ನಮ್ಮ ಯತ್ನ ಅಲ್ಲ. ಅದರ ದೊರೆ ಬೇರೆ ಇದಾನೆ. ಸರಿಯಾದ ಪ್ರೇರಣೆ ಕೊಡು, ಮಗುವಿನ ಬಾಳನ್ನು ಚೆನ್ನಾಗಿ ಮಾಡು, ಅಂತ ದೇವರನ್ನ ಕೇಳಿಕೋ".[3]

ಮಾಸ್ತಿಯವರು ಈ ಕತೆಯ ಮುಖಾಂತರ ಕುಟುಂಬದಲ್ಲಿ ಕೆಲವು ಪ್ರಮುಖ ಸಮಸ್ಯೆಗಳು ಎದುರಾದಾಗ ಹೇಗೆ ತೀರ್ಮಾನವನ್ನು ತೆಗೆದುಕೊಳ್ಳಬೇಕೆಂಬುದನ್ನು ವಿಷದೀಕರಿಸಿದ್ದಾರೆ. ಬಾಳೆಂಬ ಹಾದಿಯು ಸುಗಮವಾಗಿ ನಡೆಯಬೇಕಾದರೆ ವಿದ್ಯೆ, ಬುದ್ಧಿಯ ಜೊತೆಗೆ ಅನುಭವಸ್ತರ ನುಡಿಗಳು ಸಹ ಸಹಾಯಕವಾಗುತ್ತವೆ. ಇವೆಲ್ಲಕ್ಕೂ ದೇವರ ಅನುಗ್ರಹವಿದ್ದಾಗ ಜೀವನ ಸುಖಮಯವಾಗುತ್ತದೆ. ಕುಟುಂಬದ ನಿರ್ವಹಣೆಯಲ್ಲಿ ಅನುಭವಸ್ತರ ಹಿತನುಡಿಗಳು ಸಹ ಕತ್ತಲಲ್ಲಿ ದಾರಿತೋರುವ ಕೈದೀವಿಗೆಯಂತೆ ಎನ್ನುವುದನ್ನು 'ಬಾಳಿನ ಚೌಕಾಬಾರ' ಕತೆ ಸ್ಪಷ್ಟೀಕರಿಸುತ್ತದೆ.

ನವೋದಯ ಸಾಹಿತ್ಯ ಮೂಡಿ ಬಂದ ಸಮಯದಲ್ಲಿ ಬಹುತೇಕ ಕತೆಗಾರರು ಜೀವನದ ಅನುಭವಗಳನ್ನು ಕುರಿತೆ ಹೆಚ್ಚಿಗೆ ಕಥೆಗಳನ್ನು ಬರೆದದ್ದುಂಟು, ಮಾಸ್ತಿಯವರ ಬಹುತೇಕ ಕಥೆಗಳನ್ನೇ ಗಮನಿಸಿದರೂ ಈ ವಿಷಯ ಮನದಟ್ಟಾಗುತ್ತದೆ. 'ಜೋಗ್ಯೋರ ಅಂಜಪ್ಪನ ಕೋಳಿಕತೆ'ಯಲ್ಲೂ ಸಹ ಅಂಜಪ್ಪನ ಅನುಭವಕ್ಕೆ ಸಾಣೆಹಿಡಿದಂತೆ ಕಥೆ ಮುಂದುವರೆಯುತ್ತದೆ. ಇನ್ನು ಕುವೆಂಪು ರವರ 'ನನ್ನ ದೇವರು' ಎನ್ನುವ ಕಥೆಯನ್ನೇ ನೋಡಿದಾಗ ಅದೊಂದು ಕೌಟುಂಬಿಕ ನಿರ್ವಹಣೆಯನ್ನು ಚಿತ್ರಿಸುವ ಅದ್ಭುತ ಕಥೆಯನ್ನಿಸುತ್ತದೆ. ಕಥೆಯಲ್ಲಿ ಬರುವ ಸುಂದರ ಯುವತಿಯೊಬ್ಬಳು ತನ್ನ ಎಳೆ ವಯಸ್ಸಿನಲ್ಲಿ

3. ಮಾ.ವೆಂ.ಅಯ್ಯಂಗಾರ್, ಸಣ್ಣಕತೆಗಳು, ಸಂಪುಟ ೫ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೮೭, ೮೮

ವಿಧವೆಯಾದಾಗ ಆಕೆ ಅನುಭವಿಸುವ ಯಾತನೆಗಳು, ಜೊತೆಗೆ ಬಾವನನ್ನು ಕೂಡಿಕೊಳ್ಳಬೇಕೆಂಬ ಅವಳ ಹಂಬಲ, ಅಂತಹ ಸಂದರ್ಭದಲ್ಲಿ ಭಾವನಾದವನು ತೆಗೆದುಕೊಳ್ಳುವ ನಿರ್ಣಯ ಇವೆಲ್ಲವೂ ಸಹ ಒಂದು ಕುಟುಂಬವನ್ನು ಯಶಸ್ವಿಯಾಗಿ ದಡಮುಟ್ಟಿಸುವಲ್ಲಿ ಸಫಲವಾಗುವಂತೆ ಕಾಣುತ್ತದೆ. ನವೋದಯ ಕಾಲಘಟ್ಟದಲ್ಲಿ ರಚನೆಯಾದ ಬಹುತೇಕ ಕತೆಗಾರರಲ್ಲಿ ಈ ರೀತಿಯ ಸಮಾನ ಅಂಶಗಳು ಮನೆ ಮಾಡಿರುವುದನ್ನು ಓದುಗರು ಗಮನಿಸಬಹುದಾಗಿದೆ.

- **ನಿಜಗಲ್ಲಿನ ರಾಣಿ**

ವೈವಿಧ್ಯಮಯ ಕಥೆಗಳನ್ನು ರಚಿಸುವುದರಲ್ಲಿ ಮಾಸ್ತಿಯವರು ನಿಷ್ಣಾತರೆಂಬುದನ್ನು ಹಿಂದೆ ಹೇಳಿದ್ದುಂಟು. ಅವರು ಕಥೆಗಾಗಿ ಆರಿಸಿಕೊಳ್ಳುವ ವಿಷಯ ಇತಿಹಾಸದ್ದಾಗಿರಬಹುದು. ಪುರಾಣದ್ದಾಗಿರಬಹುದು. ಇಲ್ಲವೆ ಜೀವನದಲ್ಲಿ ಘಟಿಸಿದ ವಿಷಯಯಗಳೇ ಇರಬಹುದು, ಇಲ್ಲವೆ ಅನುಭವಗಳೇ ಆಗಿರಬಹುದು ಎಲ್ಲಕ್ಕೂ ಜೀವ ತುಂಬುವ ನಿರೂಪಣಾ ತಂತ್ರಗಾರಿಕೆ ಮಾಸ್ತಿಯವರಿಗೆ ರೂಢಿಗತವಾಗಿ ಬಂದಿತ್ತು. ಮಾಸ್ತಿಯವರ ಒಟ್ಟಾರೆ ಕಥೆಗಳಲ್ಲಿ ಐತಿಹಾಸಿಕ ವಿಷಯವನ್ನೊಳಗೊಂಡ ಕಥೆಗಳೆಂದು ಒಂದು ಪಟ್ಟಿಯನ್ನೇ ಮಾಡಬಹುದು. 'ನಿಜಗಲ್ಲಿನ ರಾಣಿ' ಇತಿಹಾಸದ ವಾತಾವರಣವುಳ್ಳ ರೊಮಾಂಚನಕಾರಿ ಕಥೆ. ಅದರಲ್ಲೂ ಕನ್ನಡ ನಾಡಿನ ಚರಿತೆಯನ್ನು ಶ್ರೀಮಂತಗೊಳಿಸುವ ಕಥೆ. ನಾವು ಇತಿಹಾಸದ ಪುಟಗಳಿಂದ ಪುಲಕೇಶಿ, ಶಿವಾಜಿ, ಕೃಷ್ಣದೇವರಾಯರಂತಹ ವೀರ ಪರಾಕ್ರಮದ ರಾಜಾಧಿರಾಜರನ್ನು ಮಾತ್ರ ಓದಿದ್ದೇವೆ. ಅವರ ದಿಗ್ವಿಜಯಗಳನ್ನು ಪಟ್ಟಿಮಾಡಿದ್ದೇವೆ. ರಾಜ್ಯಕ್ಕೆ ಅವರು ನೀಡಿರುವ ಕೊಡುಗೆಗಳನ್ನು ಇಂದಿಗೂ ಜ್ಞಾಪಕಮಾಡಿಕೊಳ್ಳುತ್ತಿದ್ದೇವೆ. ಆದರೆ ಕಿತ್ತೂರು ಚೆನ್ನಮ್ಮ, ಝಾನ್ಸಿಯಂತಹ ಕೆಲವೇ ವೀರ ಮಹಿಳೆಯರನ್ನು ತಿಳಿದಿರುವ ನಮಗೆ ಮಾಸ್ತಿಯವರು ಹಲವು ಕಥೆಗಳ ಮೂಲಕ ಲಕುಮವ್ವೆ, ಗಿರಿಜವ್ವೆಯರಂತ ತ್ಯಾಗಮಯಿ ಸ್ತ್ರೀ ಪಾತ್ರಗಳನ್ನು ಪರಿಚಯಿಸುತ್ತಾರೆ.

'ನಿಜಗಲ್ಲಿನರಾಣಿ' ದೇಶಭಿಮಾನಿಯಾದ, ಆತ್ಮಾಭಿಮಾನಿಯಾದ ವೀರ ಸ್ತ್ರೀಯ ಕಥೆ, ಈ ಕಥೆಯಲ್ಲಿ ಪ್ರಮುಖವಾಗಿ ಎರಡು ಸ್ತ್ರೀ ಪಾತ್ರಗಳು ಬರುತ್ತವೆ. ಒಬ್ಬಳು ಲಕುಮವ್ವೆ, ಮತ್ತೊಬ್ಬಳು ಗಿರಿಜವ್ವೆ, ಇಬ್ಬರೂ ಒಂದಲ್ಲ ಒಂದು ರೀತಿಯಲ್ಲಿ ತ್ಯಾಗಮಯೀ ಜೀವನವನ್ನು ನಡೆಸಿದಂತಹವರು. ಲಕುಮವ್ವೆ ರಾಮರಸನಾಯಕನ ಪಟ್ಟಧರಿಸಿಯಾದರೂ ಅವಳಿಗೆ ಮಕ್ಕಳಾಗದಿದ್ದಾಗ ರಾಜ್ಯದ ಮುಂದಿನ ಹಿತ ದೃಷ್ಟಿಯಿಂದ ರಾಜನಿಗೆ ಅವಳೇ ನಿಂತು ಬೇರೊಂದು ವಿವಾಹ ಮಾಡಿಸುತ್ತಾಳೆ. ಸವತಿಯಾಗಿ ಬಂದ ಗಿರಿಜವ್ವೆಯನ್ನು ನಿಸ್ವಾರ್ಥ ಮನೋಭಾವದಿಂದ ನೋಡಿಕೊಳ್ಳುತ್ತಾಳೆ. ಕಥೆಯಲ್ಲಿ ತ್ಯಾಗದ ದೃಷ್ಠಿಯಿಂದ ಗಿರಿಜವ್ವೆ ಎಷ್ಟು ಪ್ರಮುಖಳಾಗುತ್ತಾಳೋ ಲಕುಮವ್ವೆಯೂ ಸಹ ಅಷ್ಟೇ ಪ್ರಮುಖಳಾಗುತ್ತಾಳೆ.

ಒಂದು ದೃಷ್ಟಿಯಿಂದ ಲಕುಮವ್ವೆಯದೂ ಮಹಾನ್ ತ್ಯಾಗವೇ ಆಗಿದೆ.

'ಪ್ರಸ್ತಕ ಪ್ರೀತಿ' ಎನ್ನುವ ಕೃತಿಯಲ್ಲಿ ಮಾಸ್ತಿಯವರ ಕಥೆಗಳನ್ನು ಕುರಿತು ಟಿ.ಪಿ. ಅಶೋಕರವರು ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸುತ್ತಾರೆ. "ಮಾಸ್ತಿಯವರ ಸಣ್ಣಕಥೆಗಳಲಿನ ಬಹುತೇಕ ಪಾತ್ರಗಳು ತಮ್ಮ ಜೀವನದಲ್ಲಿ ಎದುರಿಸುವ ಸಮಸ್ಯೆ, ಸಂಕಟಗಳನ್ನು ವೈಯಕ್ತಿಕ ಮಟ್ಟದಲ್ಲಿ ಕೆಲವೊಮ್ಮೆ ಪರಿಹರಿಸಿಕೊಳ್ಳುತ್ತಾರೆ. ಎಂಬುದು ನಿಜವಾದರೂ, ಕೆಲವೊಮ್ಮೆ ಸಾವು ಒಂದು ಸಮಸ್ಯೆಯನ್ನು ಬಗೆಹರಿಸಿಬಿಡುತ್ತದೆ ಎಂದು ಕಂಡರೂ ಒಟ್ಟಿನಲ್ಲಿ ನಮ್ಮ ಜೀವನವೇ ಇನ್ನಷ್ಟು ಸುಧಾರಿಸಬೇಕೆಂಬ ಸೂಚನೆಗಳು ಕಾಣದೇ ಇಲ್ಲ". (ಪ್ರಸ್ತಕ ಪ್ರೀತಿ; ಟಿ.ಪಿ. ಅಶೋಕ, ಪು.ಸಂ. ೧೬೧) ಎನ್ನುತ್ತಾ ವೆಂಕಟಶಾಮಿಯ ಪ್ರಣಯವನ್ನು ಉದಾಹರಿಸುತ್ತಾರೆ. ಆ ನಿಟ್ಟಿನಲ್ಲಿ ಮಾಸ್ತಿಯವರ ಬಹುತೇಕ ಕಥೆಗಳು ಸಾವಿನಲ್ಲಿ ಮುಕ್ತಾಯವಾಗುವುದನ್ನು ಗಮನಿಸಬಹುದು. 'ಚಿಕ್ಕವ್ವ' 'ಮುನೀಶ್ವರನ ಮರ', 'ನಿಜಗಲ್ಲಿನ ರಾಣಿ', ಮುಂತಾದ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಸಾವಿನೊಂದಿಗೆ ಮುಕ್ತಾಯವಾದರೂ ಆ ಸಾವು ಕಥೆಗೆ ಅನಿವಾರ್ಯತೆಯನ್ನು ಸೂಚಿಸುವಂತಿರುತ್ತದೆ. ಚಿಕ್ಕವ್ವನ ಆತ್ಮಹತ್ಯೆಯಿರಬಹುದು, ಗಿರಿಜವ್ವೆಯ ಪ್ರಾಣತ್ಯಾಗವಿರಬಹುದು ಇವೆಲ್ಲ ಅವರು ಹೇಡಿತನದಿಂದ ತೆಗೆದುಕೊಂಡ ತೀರ್ಮಾನವಲ್ಲ; ದಿಟ್ಟತನದಿಂದ ತೆಗೆದುಕೊಂಡ ತೀರ್ಮಾನ. ಆದ್ದರಿಂದಲೇ ಆ ಕತೆಗಳು ಯಶಸ್ವಿಯಾಗುವುದು. ಕೆಲವು ಕಥೆಗಳಲ್ಲಿ ಮುಖ್ಯ ಪಾತ್ರಗಳ ಸಾವು ದುರಂತವಾದರೂ ಓದುಗರ ಮನಸ್ಸನ್ನು ಸದಾ ನೆನಪಿಸುವ ಜೀವಂತ ಪಾತ್ರಗಳಾಗಿ ಉಳಿದು ಬಿಡುತ್ತವೆ.

ಕಥೆಯು ಕೇವಲ ಲಕುಮವ್ವೆ ಮತ್ತು ಗಿರಿಜವ್ವೆಯವರ ಬದುಕನ್ನು ಕುರಿತದಲ್ಲ. ಅದು ಎಲ್ಲ ರೀತಿಯ ರಾಜ ತಂತ್ರ ನೈಪುಣ್ಯದಿಂದ ಕೂಡಿರುವಂತಹದ್ದು. ಕಥೆಯಲ್ಲಿ ಸಮರ್ಥವಾಗಿ, ದಿಟ್ಟತನದಿಂದ ರಾಜ್ಯವನ್ನು ನಿರ್ವಹಿಸುವ ರಾಮರಸನಾಯಕ ಇದ್ದಾನೆ. ಶತ್ರುಪಾಳೆಯವರಿಗೆ ಸಹಾಯ ಮಾಡುವ ಹಾಗೂ ಅಧಿಕಾರದ ಗದ್ದುಗೆಯ ಆಸೆಯನ್ನಿಟ್ಟುಕೊಂಡು ಕುತಂತ್ರದ ಉಪಾಯಗಳನ್ನೇ ಯೋಚಿಸಿ; ರಾಜ್ಯದ ಸುಖ ಸಂತೋಷಗಳನ್ನು ಮಣ್ಣುಪಾಲುಮಾಡುವ ಗಿರಿಜವ್ವೆಯ ತಮ್ಮ ಕಸ್ತೂರಿಯೂ ಇದ್ದಾನೆ, ಅವನ ಕುತಂತ್ರ ಬದ್ಧಿಗಳಿಗೆ ತುಪ್ಪ ಸುರಿಯುವ ಅವನ ತಾಯಿಯೂ ಇದ್ದಾಳೆ. ಕಥೆಯಲ್ಲಿ ಬರುವ ಎಲ್ಲ ಪಾತ್ರಗಳು ಒಂದು ರಾಜ್ಯದ ಸ್ಥಿತ್ಯಂತರಗಳ ಚಿತ್ರಣವನ್ನು ನೀಡುವಲ್ಲಿ ಯಶಸ್ವಿಯಾಗಿವೆ.

ಕಥೆಯ ಪ್ರಾರಂಭ ರಾಮರಸನಾಯಕನ ಪಾಳಯದಲ್ಲಿ ಒಡ ಮೂಡಿದ್ದ ಸುಖ – ಸಂತೋಷದ ದಿನಗಳನ್ನು ನೆನಪಿಸುತ್ತದೆ. ಲಕುಮವ್ವೆಯ ಔದಾರ್ಯ ಹಾಗೂ ನಿಸ್ವಾರ್ಥ ಮನೋಭಾವದ ಜೊತೆಗೆ ರಾಣಿಯಾದವಳಿಗೆ ಇರಬೇಕಾದ ಎಲ್ಲ ಅರ್ಹತೆಗಳು ಅವಳಲ್ಲಿ

ಕಾಣಿಸುತ್ತವೆ. ರಾಮರಸನಾಯಕನಿಗೆ ಎರಡನೇ ರಾಣಿ ಅಥವಾ ಹೆಂಡತಿಯಾಗಿ ಬಂದ ಗಿರಿಜವ್ವೆಯೂ ನಿಸ್ವಾರ್ಥ ಮನೋಭಾವನೆಯನ್ನೇ ಹೊಂದಿರುವಂತಹವಳು. ಆದರೆ ಗಿರಿಜವ್ವೆಯ ತಮ್ಮ ಕಸ್ತೂರಿ ಹಾಗೂ ಆಕೆಯ ತಾಯಿಯ ಗುಣದಲ್ಲಿ ವ್ಯತ್ಯಾಸವನ್ನು ಕಾಣಬಹುದು. ಗಿರಿಜವ್ವೆಯ ತಮ್ಮನ ಸ್ವಾರ್ಥ ಲಾಲಸೆಯಿಂದ ಮರಾಠರು ನಿಜಗಲ್ಲು ದುರ್ಗಕ್ಕೆ ನುಗ್ಗಿ ವಿಜಯ ಸಾಧಿಸಿದಾಗ, ತನ್ನ ಪತಿಯನ್ನು ಕಳೆದುಕೊಂಡಳು ರಾಣಿ ಗಿರಿಜವ್ವೆ, ರಾಮರಸನಾಯಕ ವೀರ ಮರಣ ಹೊಂದಿದ ಮೇಲೆ ಪಾಳೆಯಪಟ್ಟು ಯಾವ ಸ್ಥಿತಿಯನ್ನು ತಲುಪುವುದೋ ಎನ್ನುವ ಆಂತಕ ಎಲ್ಲರನ್ನು ಕಾಡುತ್ತದೆ. ಲಕುಮವ್ವೆ ಸಹಗಮನ ಮಾಡಲು ನಿರ್ಧರಿಸಿದಾಗ ಗಿರಿಜವ್ವೆ ಅದನ್ನು ಒಪ್ಪದೆ ಮುಂದಿನ ಕಾರ್ಯದ ಬಗ್ಗೆ ಚಿಂತಿಸುವಂತೆ ಧೈರ್ಯ ತುಂಬುತ್ತಾಳೆ. ಆ ವೇಳೆಗಾಗಲೇ ಕಸ್ತೂರಿಯ ಕುತಂತ್ರಗಾರಿಕೆಯಿಂದಲೇ ರಾಮ ರಸನಾಯಕನು ದುರಂತ ಸಾವಿಗೀಡಾದ ವಿಷಯ ಹಾಗೂ ರಾಜ್ಯ ಶತ್ರುಗಳ ಪಾಲಾಗಿದ್ದು ಗಿರಿಜವ್ವೆಗೆ ಗೊತ್ತಾಗುತ್ತದೆ. ಇಂತಹ ಸಂದರ್ಭದಲ್ಲಿ ವಿಜಯ ಕಾಣಿಕೆಯಾಗಿ ಮರಾಠ ಸರದಾರನಿಗೆ ಒಪ್ಪಿಸಿ ಆ ಮುನ್ನ ತಮ್ಮನೊಡನೆ ದುರ್ಗದ ಮೇಲೆ ಮೆರೆವಣಿಗೆಯ ಉತ್ಸವ ಮಾಡಿಕೊಳ್ಳಲು ಬಯಸುತ್ತಾಳೆ. ಆ ಸಂದರ್ಭದಲ್ಲಿ ಆಕೆಯ ತೆಗೆದುಕೊಳ್ಳುವ ನಿರ್ಣಯ ನೋಡಿ ಇಡೀ ಪಾಳೆಯಪಟ್ಟಿನ ಜನತೆ ಹಾಗೂ ಲಕುಮವ್ವೆಯೂ ದಿಗ್ಭ್ರಮೆಗೊಳಗಾಗುತ್ತಾರೆ. ಎಳೆಯ ಕಂದನನ್ನು ಹಿರಿಯ ರಾಣಿಗೆ ಒಪ್ಪಿಸಿ, ಕೋಟೆಗೋಡೆಯ ಮೇಲೆ ವಿದ್ರೋಹಿ ತಮ್ಮನೊಡನೆ ಮೆರವಣಿಗೆಯಲ್ಲಿ ಭಾಗವಹಿಸುತ್ತಾಳೆ. ಕೊನೆಗೆ ಗದ್ದುಗೆ ಬಂಡೆಯ ಬಳಿಗೆ ಬಂದು ಗಿರಿಜವ್ವೆ ತಮ್ಮನೊಡನೆ ನುಡಿವ ಮಾತುಗಳು ಎಂತಹವರನ್ನು ಮೂಕವಿಸ್ಮಿತರನ್ನಾಗಿಸುತ್ತವೆ. ಕೋಟೆಮೇಲೆ ಮೆರವಣಿಗೆ ಹೊರಟ ಸಂದರ್ಭ ವರ್ಣನೆಯ ದೃಷ್ಟಿಯಿಂದ ಗಮನಾರ್ಹ;

> "ಕಸ್ತೂರಿ ಒಂದು ಕಡೆಯಿಂದಲೂ ತಾನು ಒಂದು ಕಡೆಯಿಂದಲೂ ಕೊತ್ತಳದ ಮೆಟ್ಟಿಲಿಗೆ ಬರುವುದೆಂದು ಏರ್ಪಾಡುಮಾಡಿ ಗಿರಿಜವ್ವೆ ಒಬ್ಬ ಚೇಟಯನ್ನು ಕುರಿತು, "ಇಂದು ನನ್ನ ತಮ್ಮನಿಗೆ ಆರತಿಮಾಡಬೇಕು, ಒಂದು ತಟ್ಟೆಯಲ್ಲಿ ಆರತಿ ತಂದಿರಿ". ಎಂದು ಹೇಳಿ, ಕೋಟೆಯ ಗೋಡೆಯ ಮೇಲೆ ಹೊರಟಳು. ಊರಿನಲ್ಲಿ ಜನವೆಲ್ಲ, "ಇಂಥ ವಿಚಿತ್ರ ಉಂಟೆ? ಇವಳ ಸೊಗಸೇನು, ಈ ಆರತಿಯೇನು?" ಎಂದು ವಿಸ್ಮಿತರಾಗಿ, ಕೋಟೆಯ ಮೇಲೆ ಎರಡು ಕಡೆಯಿಂದಲೂ ಬರುತ್ತಿರುವ ಮೆರವಣಿಗೆಯ ಗುಂಪನ್ನು ನೋಡುತ್ತಿದ್ದರು. ಒಂದು ಗಳಿಗೆಯ ಹೊತ್ತಿಗೆ ಎರಡು ಗುಂಪೂ ಗದ್ದಿಗೆಯ ಕೊತ್ತಳದ ಹತ್ತಿರ ಬಂದವು. ಗಿರಿಜವ್ವೆ ಅರ್ಧ ನಿಮಿಷ ಮುಂದಾಗಿ ಬಂದಿದ್ದು, ಕಸ್ತೂರಿ ಬಂದಾಗ್ಗೆ ಚೇಟಯ ಕೈಯಿಂದ ಆರತಿಯ ತಟ್ಟೆಯನ್ನು ತೆಗೆದುಕೊಂಡು ಮಾತನಾಡದೆ ಹತ್ತಿರಕ್ಕೆ ಬಂದಳು. ಇಬ್ಬರೂ ಕೊತ್ತಳದ ಮಧ್ಯೆ ನಿಂತಿದ್ದರು. ಇತ್ತ ಒಂದಿಪ್ಪತ್ತು ಜನ. ಅತ್ತ ಒಂದಿಪ್ಪತ್ತು ಜನ ಸದ್ದುಮಾಡದೆ ನಿಂತಿದ್ದಾರೆ. ಗಿರಿಜವ್ವೆ ಎಂದಿನಂತೆ ಗಂಭೀರವಾದ

ಭಾವದಲ್ಲಿ ತಮ್ಮನಿಗೆ ಆರತಿಯತ್ತಿ ತಟ್ಟೆಯನ್ನು ಚೇಟಿಯ ಕೈಗೆ ಕೊಟ್ಟು ಸ್ವಲ್ಪ ನಗುತ್ತಾ ತಮ್ಮನನ್ನು ಕುರಿತು ಮೃದುವಾದ ನುಡಿಯಿಂದ "ಕಸ್ತೂರಿ, ನಿನ್ನಿಂದ ನನಗೆ ಈ ಪದವಿ ಬಂತು. ನಿನ್ನನ್ನು ನಾನು ಮರೆಯಬಾರದು. ನಿನಗೂ ಗದ್ದಿಗೆಯ ಮೇಲೆ ಆಸೆ", ಎಂದು ಹೇಳಿ, ಉತ್ತರ ಕ್ಷಣದಲ್ಲಿ ಕರ್ಕಶವಾದ ಧ್ವನಿಯಿಂದ, "ನನ್ನ ನನ್ನಿಂದ ರಾಮರಸನ ಮನೆ ಕೆಟ್ಟಿತು. ನಮ್ಮನ್ನು ಹೆತ್ತವರಿಗೆ ಅಪಕೀರ್ತಿ ಬಂತು. ಕಸ್ತೂರಿ, ನಾವು ಬದುಕಬಾರದು", ಎಂದು ಕೂಗಿ, ಅವನನ್ನು ಭದ್ರವಾಗಿ ಅಪ್ಪಿಕೊಂಡು ಕೊತ್ತಳದಿಂದ ಗೋಡೆಯ ಹೊರಕ್ಕೆ ಧುಮುಕಿಬಿಟ್ಟಳು".[4]

ಗಿರಿಜವ್ವೆಯ ಸಾಹಸಸಂಪನ್ನ ಮನೋಧರ್ಮ, ಪಾಳೆಯಪಟ್ಟಿನ ಉಳಿವಿಗಾಗಿ, ಮಗನಿಗೆ ಪಟ್ಟ ಕಟ್ಟುವ ಸಲುವಾಗಿ, ತನ್ನ ಮಾನ ಉಳಿಸಿಕೊಳ್ಳುವ ಅಥವಾ ಪತಿವ್ರತಾಧರ್ಮ ಉಳಿಸಿಕೊಳ್ಳುವುದಕ್ಕಾಗಿ ಆಕೆ ಮಾಡಿದ ಪ್ರಾಣತ್ಯಾಗ, ವಿದ್ರೋಹಿ ತಮ್ಮನನ್ನು ಕೊನೆಗಾಣಿಸುವ ತಂತ್ರಗಾರಿಕೆ, ಇವೆಲ್ಲವೂ ನಮ್ಮ ಭಾರತೀಯ ಸಂಸ್ಕೃತಿಯ ವೀರರಾಣಿಯ ಜೀವಾಳದಂತೆ ಚಿತ್ರಿತವಾಗಿದೆ. ಗಿರಿಜವ್ವೆಯ ದುರಂತ ಕಣ್ಣೀರಿನ ಜೊತೆಗೆ ಹೆಮ್ಮೆಯನ್ನು ಮೂಡಿಸುತ್ತದೆ. ಆಕೆಯ ಬಗ್ಗೆ ಪ್ರತಿಯೊಬ್ಬರಲ್ಲೂ ಗೌರವಯುತ ಭಾವನೆ ಮೂಡುವುದಲ್ಲದೆ ತ್ಯಾಗದ ಮನೋಭಾನವೆ ಉಳಿಯುವಂತೆ ಮಾಡಿಬಿಡುತ್ತದೆ.

- **ಸಾವಿಯಬ್ಬೆ**

ಮಾಸ್ತಿಯವರದು ನೂರು ಕತೆಗಳು, ನೂರಾರು ಪಾತ್ರಗಳು, ಬದುಕಿನ ಅನಂತ ಮುಖಗಳನ್ನು ಅವುಗಳ ಸ್ವಭಾವ ವೈಚಿತ್ರ್ಯಗಳನ್ನು ಹೃದಯಸ್ಪರ್ಶಿಯಾಗುವಂತೆ ಅವರು ನಿರೂಪಿಸಿದ್ದಾರೆ. ಪ್ರೀತಿ, ನೋವು, ನಲಿವು, ದೇಶದ ಮತ್ತು ಮನುಷ್ಯನ ಘನತೆ, ಅವನತಿ, ಸಾರ್ಥಕ ಜೀವನ, ನೈತಿಕ ಹೊಣೆಗಾರಿಕೆ, ಸಂಸ್ಕೃತಿಯ ಮಹತ್ವ, ಪರಂಪರಾನುಗತ ಮೌಲ್ಯಗಳ ವಿಶ್ಲೇಷಣೆ – ಹೀಗೆ ಅವರು ಕತೆಗಳಲ್ಲಿ ಒಡಮೂಡಿಸದ ವಿಷಯಗಳಿಲ್ಲ. 'ಸಾವಿಯಬ್ಬೆ' ಎನ್ನುವ ಕಥೆ ಸಹ ನಮ್ಮ ಕನ್ನಡ ನಾಡಿನ ಚರಿತೆಯನ್ನು ಸಾರುವಂತಹುದು. 'ನಿಜಗಲ್ಲಿನ ರಾಣಿ'ಯಲ್ಲಿ ಪ್ರಪಾತಕ್ಕೆ ತಮ್ಮನೊಡನೆ ಬಿದ್ದು ಪ್ರಾಣತ್ಯಾಗ ಮಾಡಿಕೊಳ್ಳುವುದರೊಂದಿಗೆ ಪಾಳೆಯಪಟ್ಟಿನ ಮುಂದಿನ ಭವಿಷ್ಯವನ್ನು ರಾಣಿ ಗಿರಿಜವ್ವೆ ಬಯಸುತ್ತಾಳೆ. 'ಸಾವಿಯಬ್ಬೆ' ಕಥೆಯಲ್ಲಿ ಸಾವಿಯಬ್ಬೆ ಹೆಣ್ಣಾದರೂ ವೀರಾವೇಶದಿಂದ ಶತ್ರು ಸೇನೆಯೊಂದಿಗೆ ಹೋರಾಡಿ ವೀರ ಮರಣವನ್ನಪ್ಪುತ್ತಾಳೆ. 'ನಿಜಗಲ್ಲನ ರಾಣಿ' ಮತ್ತು 'ಸಾವಿಯಬ್ಬೆ' ಕಥೆಗಳೆರಡೂ ಕನ್ನಡ ನಾಡಿನ ಚರಿತೆಯನ್ನು ಸೂಚಿಸುವಂತಿದ್ದರೂ ಎರಡೂ ಕಥೆಗಳು ಸಾಗುವ ದಾರಿ ಬೇರೆ. ಗಿರಿಜವ್ವೆ ಸಾಧ್ವಿಯಾಗಿ, ಹೆಣ್ತನದ ಗುಣಗಳನ್ನೆಲ್ಲ ತನ್ನಲ್ಲಿ ಅಂತರ್ಗತ ಮಾಡಿಕೊಂಡಿರುವಂತಹವಳು. ಸಾವಿಯಬ್ಬೆ ಹೆಣ್ಣಾಗಿದ್ದರೂ

---

4. ಮಾ.ವೆಂ.ಅಯ್ಯಂಗಾರ್ : ಸಣ್ಣಕತೆಗಳು, ಸಂಪುಟ ೨ (ಎಂ.ಜಿ.ಪಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೩೯, ೪೦

ಅವಳನ್ನು ಬೆಳೆಸುವ ರೀತಿ ಗಂಡಿನ ತರಹದ್ದು. ಅವಳಿಗೆ ಒಬ್ಬ ವೀರ ಪುರುಷನಿಗೆ ಗೊತ್ತಿರುವ ಎಲ್ಲಾ ವಿದ್ಯೆಗಳೂ ಗೊತ್ತಿವೆ. ರಾಜ್ಯ ರಕ್ಷಣೆಗೆ ತಾನೇ ನಿಂತು ವೀರಾವೇಶದಿಂದ ಹೋರಾಡುವಷ್ಟು ಧೈರ್ಯವಂತಳಾಗಿದ್ದಾಳೆ. ಸಾವಿಯಬ್ಬೆ ಮತ್ತು ಗಿರಿಜವ್ವೆಯ ಪಾತ್ರಗಳು ವಿಭಿನ್ನವಾಗಿ ಕಂಡುಬಂದರೂ ರಾಜ್ಯದ ಹಿತದೃಷ್ಟಿಯನ್ನೇ ಇಬ್ಬರೂ ಮೂಲವನ್ನಾಗಿಸಿಕೊಂಡಿದ್ದಾರೆ. ಎರಡೂ ಕಥೆಗಳಲ್ಲಿ ಸಾವೇ ಪ್ರಮುಖ ಪಾತ್ರ ವಹಿಸಿರುವುದನ್ನು ಗಮನಿಸಿಬಹುದು.

"ಸಾವಿಯಬ್ಬೆ ಕಾಳಗದಲ್ಲಿ ಜೀವವಳಿದ ವಾರ್ತೆಯನ್ನು ಅವಳ ತಮ್ಮ ಬಂಕಾಪುರದಲ್ಲಿದ್ದ ಅರಸನಿಗೆ ತಂದು ತಿಳಿಸಿದನು.

ಚಲದುತ್ತರಂಗ ಗಂಗವಜ್ರ ಮಾರಸಿಂಹಮಭೂಪನಿಗೆ ಸಾವಿನ ಸುದ್ದಿ ಕೇಳುವುದು ಹೊಸತೇನಲ್ಲ. ಆದರೂ ಸೋದರ ಸೊಸೆ ಮಡಿದ ಮಾತನ್ನು ಕೇಳಿ ಅವನು ಬಹುದುಃಖಪಟ್ಟನು".[5]

ಎನ್ನುವ ಕಥೆಯ ಪ್ರಾರಂಭವನ್ನು ಗಮನಿಸಿದಾಗ ಪ್ರಾರಂಭದಲ್ಲಿಯೇ ಸಾವಿಯಬ್ಬೆ ಕಾಳಗದಲ್ಲಿ ಮೃತಳಾಗಿರುವುದು ಗೊತ್ತಾಗುತ್ತದೆ. ಅಲ್ಲದೆ ಒಂದು ಸಾಮ್ರಾಜ್ಯದ ಅಳಿವು ಉಳಿವಿನ ಸಂದರ್ಭದಲ್ಲಿ ಸಾವು ನೋವುಗಳು ಲೆಕ್ಕಕ್ಕೆ ಸಿಗುವುದಿಲ್ಲ ಎನ್ನುವ ನಿಲುವು ಗೋಚರಿಸುತ್ತದೆ. ಕಥೆಯ ಪ್ರಾರಂಭವದಲ್ಲಿಯೇ ಕಥಾನಾಯಕಿ ಸಾವನಪ್ಪಿದರೂ, ಮಾರಸಿಂಹನು ಹಿಂದಿನ ಘಟನೆಗಳನ್ನು ಮೆಲುಕು ಹಾಕುವ ರೀತಿಯಲ್ಲಿ ಕಥೆ ಮುಂದುರಿಯುತ್ತದೆ. ಇಂಗ್ಲೀಷ್‌ನಲ್ಲಿ ಕರೆಯಬಹುದಾದ 'ಹಿನ್ನೋಟ ತಂತ್ರದ ಕತೆ'ಗಳಿಗೆ ಈ ಕಥೆ ಉದಾಹರಣೆಯಾಗಿ ನಿಲ್ಲುವಂತಹುದು.

ಚಲದುತ್ತರಂಗ ಗಂಗವಜ್ರ ಮಾರಸಿಂಹಭೂಪನಿಗೆ ಮಕ್ಕಳಿಲ್ಲದಿದ್ದಾಗ ತಂಗಿ ಜಾಬವ್ವೆಯ ಹೆಣ್ಣು ಮಗುವನ್ನೇ ದತ್ತು ತೆಗೆದುಕೊಳ್ಳುತ್ತಾನೆ. ರಾಜ್ಯದ ಗದ್ದುಗೆಯೇರಲು ಕೇವಲ ಗಂಡುಮಗುವೇ ಆಗಬೇಕೆನ್ನುವ ನಿಲುವು ಕಥೆಯಲ್ಲಿಲ್ಲ, ಹೆಣ್ಣಿನ ಬಗ್ಗೆ ಅಪಾರವಾದ, ಗೌರವಿತವಾದ ಭಾವನೆ ಇದ್ದಿದ್ದರಿಂದಲೇ ಮಾಸ್ತಿಯವರು ಈ ಕಥೆಯನ್ನು ಬರೆದಿರಬಹುದು ಎಂದೆನಿಸುತ್ತದೆ. ದತ್ತು ತಂದ ಮಗು ಹೆಣ್ಣಾದರೂ ಆಕೆಗೆ ಒಬ್ಬ ರಾಜಕುಮಾರನಿಗೆ ಕಲಿಸುವಂತಹ ಸಕಲ ವಿದ್ಯೆಗಳನ್ನು ಮಾರಸಿಂಹಭೂಪನು ಅವಳಿಗೆ ಕಲಿಸುತ್ತಾನೆ. ಸಾವಿಯಬ್ಬೆ ಹೆಣ್ಣಾದರೂ ಒಬ್ಬ ತರುಣನಂತೆ ಬೆಳೆಯುತ್ತಾಳೆ. ವಿವಾಹದ ಮಾತು ಬಂದಾಗಲು ಅವಳೇ ತನ್ನ ಗಂಡನನ್ನು ಹುಡುಕಿಕೊಳ್ಳಲು ನಿರ್ಧರಿಸುತ್ತಾಳೆ. ಅದಕ್ಕಾಗಿ ಸಾವಿಯಬ್ಬೆ ಗಂಡಿನ ಮುಖವಾಡ ಧರಿಸಿ ಅವಳನ್ನು ವರಿಸಲು ಬಂದ ತರುಣರೊಂದಿಗೆ ದ್ವಂದ್ವ

---

೫. ಮಾ.ವೆಂ.ಅಯ್ಯಂಗಾರ್ : ಸಣ್ಣಕತೆಗಳು, ಸಂಪುಟ ೬ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೯೦) ಪು.ಸಂ. ೩೭

ಯುದ್ಧಮಾಡಿ ಲೋಕ ವಿದ್ಯಾಧರನನ್ನು ಪತಿಯನ್ನಾಗಿ ಸ್ವೀಕರಿಸುತ್ತಾಳೆ. ನಾವು ರಾಮಯಣ ಇಲ್ಲವೆ ಮಹಾ ಭಾರತದಂತಹ ಮಹಾಕಾವ್ಯಗಳಲ್ಲಿ ಒಂದು ಹೆಣ್ಣಿಗೋಸ್ಕರ ಸ್ವಯಂವರ ಏರ್ಪಡಿಸಿ. ಅಲ್ಲಿ ವೀರಾಧಿವೀರರನ್ನೆಲ್ಲಾ ಬರಮಾಡಿಸಿ ಅವರಲ್ಲಿ ಅಪಾರ ಶಕ್ತಿ ಮತ್ತು ಯುಕ್ತಿಯುಳ್ಳವನನ್ನು ಸುಂದರ ಕನ್ಯೆ ವರಿಸುವುದನ್ನು ತಿಳಿದಿದ್ದೇವೆ. ಆದರೆ ಹೆಣ್ಣಾದವಳು ಗಂಡಿನ ಮೊಗವಾಡ ಧರಿಸಿ ತಾನೇ ತನ್ನ ಪತಿಯನ್ನು ವರಿಸುವುದನ್ನು 'ಸಾಬಿಯಬ್ಬೆ' ಕಥೆಯಲ್ಲಿ ನೋಡಬಹುದಾಗಿದೆ.

ಇತಿಹಾಸವನ್ನು ಗಮನಿಸಿದಾಗ ಎಷ್ಟೋ ಮಹಾ ಸಾಮ್ರಾಜ್ಯಗಳಲ್ಲಿ ಅಧಿಕಾರದ ಗದ್ದುಗೆಯೇರಲು ಗಂಡುಮಗನನ್ನು ಬಯಸುವುದುಂಟು. ಒಂದು ವೇಳೆ ಪಟ್ಟದರಸಿಗೆ ಹೆಣ್ಣುಮಕ್ಕಳೇ ಆದ ಸಂದರ್ಭದಲ್ಲಿ ಮತ್ತೊಂದು ಮದುವೆಯಾಗಿ ಗಂಡು ಮಗುವನ್ನು ಬಯಸುವುದುಂಟು. ಇನ್ನೂ ಹಲವು ಸಂದರ್ಭಗಳಲ್ಲಿ ರಾಜನಾದವನಿಗೆ ಮಕ್ಕಳೇ ಆಗದಿದ್ದಾಗ ಗಂಡು ಮಗುವನ್ನೇ ದತ್ತು ತೆಗೆದುಕೊಳ್ಳುವುದನ್ನು ಗಮನಿಸಬಹುದು. ಆದರೆ 'ಸಾವಿಯಬ್ಬೆ' ಕಥೆ ಈ ಎಲ್ಲ ರೀತಿಯಿಂದಲೂ ವಿಭಿನ್ನವಾಗಿದೆ. ಅಂದರೆ ಗಂಗವಂಶದ ಚಲದುತ್ತರಂಗ ಮಾರಸಿಂಹಭೂಪನು ಸಾವಿಯಬ್ಬೆ ಹೆಣ್ಣಾದರೂ ರಾಜ್ಯವನ್ನು ಸಮರ್ಥವಾಗಿ ನಿರ್ವಹಿಸಬಲ್ಲಳು ಅನ್ನುವ ನಂಬಿಕೆ ಅವನಲ್ಲಿತ್ತು. ಅದಕ್ಕೋಸ್ಕರವೇ ಅವನು ಸಾವಿಯಬ್ಬೆಗೆ ಸಕಲ ವಿದ್ಯೆಗಳನ್ನು ಕಲಿಸಿಕೊಡುವಂತಹುದು. ಸಾವಿಯಬ್ಬೆ ಅಚಲ ಸಾಹಸಿಯಂತೆ ಕಂಡುಬಂದರೂ ಕಾಳಗಕ್ಕೆ ಹೋಗಬೇಕಾದ ಸಂದರ್ಭ ಬಂದಾಗ ಚಲದುತ್ತರಂಗ ಮಾರಸಿಂಹ ಆಕೆಯನ್ನು ಮುಕ್ತ ಮನಸ್ಸಿನಿಂದ ಕಳಿಸಿಕೊಡಲು ಹಿಂದು–ಮುಂದು ನೋಡುತ್ತಾನೆ. ಇದನ್ನು ಗಮನಿಸಿದಾಗ ಚಲದುತ್ತರಂಗ ಮಾರಸಿಂಹ ಭೂಪನಿಗೆ ಎಲ್ಲೋ ಒಂದು ಕಡೆ ಮನಸ್ಸಿನಲ್ಲಿ 'ಸಾವಿಯಬ್ಬೆ' ಕೇವಲ ಹೆಣ್ಣು ಎಂಬ ಭಾವನೆ ಬಂದಿರಬಹುದೆ? ಎನ್ನುವ ಅನುಮಾನ ಬರುವುದುಂಟು. ಮಾರಸಿಂಹಭೂಪನು ಸಾವಿಯಬ್ಬೆಯನ್ನು ವೀರನಂತೆ ಸಾಕಿ ಕಾಳಗಕ್ಕೆ ಕಳುಹಿಸಿಕೊಡಲು ಯೋಚಿಸುತ್ತಿದ್ದಾಗ, ಸಾವಿಯಬ್ಬೆ ತನ್ನ ಸಾಕು ತಂದೆಗೆ ಧೈರ್ಯ ತುಂಬುವ ಸನ್ನಿವೇಶ ಗಮನಾರ್ಹ;

> "ತಂದೆಯ ಯೋಚನೆಯನ್ನು ಕೇಳಿ ತಿಳಿದಂತೆ ಸಾವಿ, "ನಾನು ಪಾಳೆಯದಲ್ಲಿ ನಿಲ್ಲುವಷ್ಟಕ್ಕಾಗಿ ಜೊತೆ ಸಾರುವುದಿಲ್ಲ. ನಿಮ್ಮಳಿಯನೊಡನೆ ಕಾಳಗಕ್ಕೂ ಹೋಗುತ್ತೇನೆ. ನೀವು ನನ್ನನ್ನು ಮಗನಂತೆ ಸಾಕಿದಿರಿ. ಈಗ ಒಬ್ಬ ಮಗನಂತೆ ಕಳುಹಿಸಿಕೊಡಿ. ಗೆದ್ದರೆ ಇಬ್ಬರೂ ಗೆಲ್ಲುವೆವು. ಸೋತೆವು, ಆಗಲು ನಮಗೆ ಗೆಲುವೇ, ಆಶೀರ್ವಾದಮಾಡಿ ನಗುತ್ತ ಕಳುಹಿ"[6]

---

6. ಮಾ.ವೆಂ.ಅಯ್ಯಂಗಾರ್ : ಸಣ್ಣಕತೆಗಳು, ಸಂಪುಟ ೨ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೪೦

ಸಾವಿಯಬ್ಬೆ ಲೋಕ ವಿದ್ಯಾಧರನೊಂದಿಗೆ ಕಾಳಗಕ್ಕೆ ಹೋಗಿ ವೀರಾವೇಶದಿಂದ ಹೋರಾಡುತ್ತಾಳೆ. ಹೆಣ್ಣು ಕೇವಲ ಮನೆಯ ಕೆಲಸಗಳಿಗಷ್ಟೇ ಸೀಮಿತವಲ್ಲ, ಅವಳು ಪ್ರಭುತ್ವದ ನಿರ್ವಹಣೆಯನ್ನು ಸಮರ್ಥವಾಗಿ ನಿಭಾಯಿಸಬಲ್ಲಳು ಎಂಬುದಕ್ಕೆ ಈ ಕಥೆ ನಿದರ್ಶನವಾಗುತ್ತದೆ. ಕಥೆಯಲ್ಲಿ ಲೋಕವಿದ್ಯಾಧರ ಹಾಗೂ ಸಾವಿಯಬ್ಬೆ ಇಬ್ಬರೂ ವೀರ ಮರಣವನ್ನಪ್ಪುತ್ತಾರೆ. ಇಬ್ಬರ ಸಾವಿಗೂ ಆನೆಯೇ ಕಾರಣವಾಗುತ್ತದೆ. ಕಥೆಯಿಂದ ಸಾವಿಯಬ್ಬೆ ವೀರಳೂ, ಧೀರಳೂ, ಅಸಮಾನ್ಯಶೂರಳೂ ಎಂದು ಗೊತ್ತಾದರೂ ಸಹ ಅವಳು ಶತ್ರು ಸೈನ್ಯದಿಂದ ಗಾಯಕ್ಕೊಳಗಾದಾಗ ವಿಷದ ಗುಳಿಗೆಯನ್ನು ಉಪಯೋಗಿಸಿ ಸಾವನ್ನಪ್ಪುವ ರೀತಿ ಹೇಡಿಯಂತೆ ಕಾಣಿಸಿಬಿಡುತ್ತದೆಯಾದರೂ, ಒಂದು ಕಡೆ ತನ್ನ ಗಂಡ ತನ್ನ ಮುಂದೆಯೇ ವೀರಮರಣಹೊಂದಿದ್ದಾನೆ ಎಂದು ತಿಳಿಯುವುದು. ಮತ್ತೊಂದೆಡೆ ಆಕೆ ವಿಪರೀತವಾಗಿ ಗಾಯಕ್ಕೊಳಗಾದ್ದರಿಂದ ಬದುಕುಳಿಯುವುದು ಅಸಾಧ್ಯ ಎನ್ನುವ ಸಂದರ್ಭದಲ್ಲಿ ವಿಷ ಪ್ರಯೋಗ ಅನಿವಾರ್ಯ ಎನಿಸುತ್ತದೆ. ಕಥೆ ಹಲವು ರೀತಿಯಲ್ಲಿ ಯಶಸ್ವಿಯೆನಿಸಿದರೂ, ಹಲವು ರೀತಿಯಲ್ಲಿ ದೌರ್ಬಲ್ಯದಿಂದ ಸೊರಗಿಬಿಡುತ್ತದೆ. ಏಕೆಂದರೆ ಕಥೆಯಲ್ಲಿ ಪ್ರಮುಖ ಪಾತ್ರಗಳೆಲ್ಲಾ ಸಾವಿನೊಂದಿಗೆ ಮುಕ್ತಾಯವಾಗುತ್ತವೆ. ಸಾವಿಯಬ್ಬೆ ಮತ್ತು ಲೋಕವಿದ್ಯಾಧರನ ವೀರಮರಣವು ತಿಳಿದಾಕ್ಷಣ ಮಾರಸಿಂಹ ಭೂಪನು ಸಲ್ಲೇಖನ ವ್ರತದಿಂದ ಸಾವಿಗೆ ಶರಣಾಗುತ್ತಾನೆ. ಒಂದು ರಾಜ್ಯದ ಪ್ರಭುತ್ವವನ್ನು ಯಶಸ್ವಿಯಾಗಿ ನಿರ್ವಹಿಸಬೇಕಾದವರೇ ಈ ರೀತಿಯಾಗಿ ಸಾವಿಗೆ ಶರಣಾಗಿಬಿಟ್ಟರೆ ರಾಜ್ಯದ ಪರಿಸ್ಥಿತಿಯೇನು? ಎನ್ನುವುದು ಚಿಂತೆನೆಗೀಡುಮಾಡುತ್ತದೆ. ಇತಿಹಾಸದ ಘಟನೆಯನ್ನಾಧರಿಸಿದ ಕಥೆಯಾಗಿರುವುದರಿಂದ ಅದನ್ನು ಸುಖಾಂತಗೊಳಿಸುವುದು ಸಮಂಜಸವಲ್ಲ ಅನ್ನುವ ಅರಿವು ಮಾಸ್ತಿಯವರಿಗಿದೆ. ಏನೇ ಆಗಲಿ ಕನ್ನಡ ನಾಡಿನಲ್ಲಿ ಕಿತ್ತೂರು ಚೆನ್ನಮ್ಮನಂತಹ ವೀರಮಹಿಳೆಯರ ಸಾಲಿನಲ್ಲಿ ನಿಜಗಲ್ಲಿನ ರಾಣಿ, ಗಿರಿಜವ್ವೆ, ಹಾಗೂ ಸಾವಿಯಬ್ಬೆಯರೂ ನಿಲ್ಲುತ್ತಾರೆ ಎನ್ನುವುದೇ ಹೆಮ್ಮೆಯ ವಿಷಯ.

➤ **ರಾಣಿ ಹಾಟ್ ಷೇಪ್ ಸಿಟೊ**

ಮಾಸ್ತಿಯವರ ವ್ಯಾಸಂಗ ಹಾಗೂ ಆಸಕ್ತಿ ಎಷ್ಟು ವಿಶಾಲವಾದ ವ್ಯಾಪ್ತಿಯನ್ನು ಹೊಂದಿದೆ ಎನ್ನುವುದಕ್ಕೆ ಅವರ ಐತಿಹಾಸಿಕ ಕತೆಗಳು ಸಾಕ್ಷಿಯಾಗುತ್ತವೆ. ಪ್ರಪಂಚದ ನಾನಾ ಕಡೆಗಳಿಂದ ಐತಿಹಾಸಿಕ ಘಟನೆಗಳನ್ನಾಧರಿಸಿ ಮಾಸ್ತಿಯವರು ಕಥೆಗಳನ್ನು ರಚಿಸಿರುವುದುಂಟು. ಅವರ ಕೆಲವು ಕಥೆಗಳನ್ನು ಉದಾಹರಿಸಿದರೆ ಇದಕ್ಕೆ ಸ್ಪಷ್ಟತೆ ದೊರೆಯುತ್ತದೆ. 'ಪ್ರಿಯದರ್ಶಿ ಅಶೋಕ', 'ನಿಜಗಲ್ಲಿನ ರಾಣಿ', 'ಸಾವಿಯಬ್ಬೆ' ಇವು ಭಾರತದೇಶದ ಇತಿಹಾಸವುಳ್ಳ ಕಥೆಗಳಾದರೆ, ವಿದೇಶಿ ಇತಿಹಾಸದ ಘಟನೆಗಳನ್ನು ಕುರಿತ ಕಥೆಗಳಾಗಿ.... 'ರಾಣಿ ಹಾಟ್ ಷೇಪ್ ಸಿಟೊ', 'ನರ್ತಕಿಯ ಪರಾಭವ', 'ಕೆಟ್ಟಕಾಲ',

'ನೆಪೋಲಿಯನ್ನನ ಸೋಲು', 'ನೇಷ್‌ಹುವೆಲ್ ಕೋಯೋಟಲ್' ಮುಂತಾದುವನ್ನು ಗಮನಿಸಬಹುದು. ಈ ಎಲ್ಲಾ ಕಥೆಗಳು ವಾಸ್ತಿಂಯುವರ ಆಸಕ್ತಿಯನ್ನು ನಿರ್ಧರಿಸಿರುವಂತಹವು.

ಈಜಿಪ್ಟ್‌ನಲ್ಲಿ ಒಡಹುಟ್ಟಿದ ರಾಜಕುಮಾರ ಕುಮಾರಿಯರು ಮದುವೆಯಾಗಿ ರಾಜ್ಯವಾಳುವ ಪದ್ಧತಿ. 'ರಾಣಿ ಹಾಟ್ ಷೇಪ್ ಸಿಟೂ' ಕಥೆಯಲ್ಲಿ ಅಕ್ಕ ರಾಣಿ, ತಮ್ಮ ರಾಜ. ಅಕ್ಕ ಮೊದಲಿನಿಂದಲೂ ಗಂಡಿನಂತೆಯೇ ನಡೆದುಕೊಳ್ಳುತ್ತಾ ರಾಜ್ಯವಾಳುವುದರಲ್ಲಿ ಮಗ್ನರಾಗಿರುತ್ತಾಳೆ. 'ರಾಣಿ ಹಾಟ್ ಷೇಪ್ ಸಿಟೂ' ಕಥೆಯೂ ಸಹ ಹಿಂದಿನ ಘಟನೆಗಳನ್ನು ನೆನಪಿಸುವ ರೀತಿಯಲ್ಲೇ ಸಾಗುತ್ತದೆ. ರಾಜ ಟೇಹು ಟೇಮಿಾಸನ ಆಪ್ತ ಸಚಿವ ಅಹಮೀಸ್ ಬಂದು ರಾಣಿ ಹಾಟ್‌ಷೇಪ್ ಸಿಟೂವಿಗೆ ಅರಿಕೆ ಮಾಡಿಕೊಳ್ಳುವುದರೊಂದಿಗೆ ಕಥೆ ಪ್ರಾರಂಭವಾಗುತ್ತದೆ. ಅನಂತರ ಈಜಿಪ್ಟ್ ದೇಶದ ಅಂದಿನ ರಾಜ ಪರಂಪರೆಯ ಪದ್ಧತಿಗಳು ತಿಳಿಯುತ್ತಾ ಹೋಗುತ್ತವೆ. ಈ ಕಥೆಯನ್ನು ಓದುವವರಿಗೆ ಆಶ್ಚರ್ಯವೆನಿಸುವುದುಂಟು. ಏಕೆಂದರೆ ಒಡಹುಟ್ಟಿದವರೇ ವಿವಾಹವಾಗುವ ಪದ್ಧತಿಯನ್ನು ಭಾರತೀಯ ಸಂಸ್ಕೃತಿಯಲ್ಲಿ ಕನಸು-ನನಸಿನಲ್ಲೂ ಊಹಿಸಲಾಗದು. ಅಷ್ಟೇ ಅಲ್ಲದೆ ವಯಸ್ಸಿನಲ್ಲಿ ಗಂಡು ದೊಡ್ಡವನಾಗಿದ್ದು, ಹೆಣ್ಣು ಚಿಕ್ಕವಳಾಗಿದ್ದರೂ ನಡೆಯುತ್ತದೆ. ಆದರೆ ಹೆಣ್ಣು ೧೫-೨೦ ವರ್ಷ ದೊಡ್ಡವಳಾಗಿದ್ದು, ಗಂಡಿನ ವಯಸ್ಸು ಚಿಕ್ಕದಾದಗ ಸೂಕ್ತವಾಗಲಾರದು. ಪ್ರಸ್ತುತ ಕಥೆಯಲ್ಲಿ ಹಾಟ್‌ಷೇಫ್ ಸಿಟೂ ಮತ್ತು ಟೇಹು ಟೇಮಿಾಸ್ ಅಕ್ಕ ತಮ್ಮಂದಿರು. ಹಾಗೆಯೇ ಆ ದೇಶದ ಪದ್ದತಿಯಂತೆ ರಾಜ-ರಾಣಿಯರು ರಾಣಿ ಹಾಟ್ ಷೇಪ್ ಸಿಟೂ ರಾಜ ಟೇಹು ಟೇಮಿಾಸ್‌ನಿಗಿಂತ ಹದಿನೈದು ವರ್ಷ ವಯಸ್ಸಿನಲ್ಲಿ ದೊಡ್ಡವಳು. ಆದರೂ ಇವರಿಬ್ಬರ ನಡುವೆ ಮದುವೆಯೆಂಬುದು ಆಗಿರುತ್ತದೆ. ಒಂದು ರೀತಿಯಲ್ಲಿ ಬಾಲ್ಯ ವಿವಹಾವೆಂದೇ ಕರೆಯಬಹುದು. ರಾಣಿ ಹಾಟ್ ಷೇಪ್ ಸಿಟೂಳನ್ನು ತಂದೆಯಾದವನು ತುಂಬ ಮುದ್ದಿನಿಂದ ಬೆಳಸಿ, ಆಡಳಿತದ ಎಲ್ಲ ವಿವರಗಳನ್ನು ಕಲಿಸಿದ್ದರಿಂದ ರಾಜ್ಯದ ಅಧಿಕಾರದ ಚುಕ್ಕಾಣಿಯನ್ನು ಆಕೆಯೇ ನಿಭಾಯಿಸುವಲ್ಲಿ ಯಶಸ್ವಿಯಾಗುತ್ತಾಳೆ. ಪ್ರಭುತ್ವವನ್ನು ಒಬ್ಬ ಮಗನಂತೆಯೇ ಎಲ್ಲ ರೀತಿಯಿಂದಲೂ ಮೇಲ್ಗೈಯಾಗಿಸುವಲ್ಲಿ ಶ್ರಮಿಸುತ್ತಾಳೆ. ಇಷ್ಟಾದರೂ ವಯಸ್ಸಿನಲ್ಲಿ ತುಂಬಾ ಅಂತರವಿದ್ದುದರಿಂದ ಹಾಟ್‌ಷೇಪ್ ಸಿಟೂ ಹಾಗೂ ಟೇಹು ಟೇಮೀಸರಿಗೆ ಬಹಳ ದಿನ ಮಕ್ಕಳಾಗದಿದ್ದಾಗ ಸಾಮ್ರಾಜ್ಯದಲ್ಲಿ ಜನತೆ ಚಿಂತೆಗೀಡಾಗುತ್ತಾರೆ. ಸಿಟೂ ರಾಣಿಯಾದರೂ ಅವಳು ರಾಣಿಯಂತೆ ವರ್ತಿಸುವುದಿಲ್ಲ. ಎಲ್ಲ ರೀತಿಯಿಂದಲೂ ಗಂಡಿನಂತೆಯೇ ನಡೆದು ಕೊಳ್ಳಲು ಬಯಸುತ್ತಾಳೆ. ಕೊನೆಗೆ ಒಂದು ಹೆಣ್ಣು ಮಗುವಿಗೆ ಮಾತ್ರ ಜನ್ಮವಿತ್ತು ಮುಂದೆ ಆಕೆ ಗರ್ಭಿಣಿಯಾಗದೆ ಜನತೆಯ ಆತಂಕಕ್ಕೆ ಕಾರಣಲಾಗುತ್ತಾಳೆ.

ಟೇಹು ಟೇಮಿಸ್ ಹೆಣ್ಣಿನ ಪ್ರೇಮದ ಸೌಖ್ಯ ಲಭಿಸುವುದು ಬೇರೊಂದು ಹೆಣ್ಣನ್ನು ಅವನು ಇಷ್ಟ ಪಟ್ಟು ಮದುವೆಯಾದಾಗ, ಟೇಹು ಟೇಮಿಸ್ ಆಶ್ಚರ್ಯಕರವಾಗಿ ಬೇರೊಂದು ವಿವಾಹವಾಗಲು ಮುಂದಾದಾಗ ರಾಣಿ ಸಿಟೂವಿಗೆ ಇಷ್ಟವಿಲ್ಲದಿದ್ದರೂ ಒಪ್ಪಿಗೆಯನ್ನು ಸೂಚಿಸಿಬಿಡುತ್ತಾಳೆ. ಆದರೆ ಅನಂತರ ಪ್ರತಿಯೊಂದು ವಿಚಾರದಲ್ಲೂ ವಿರೋಧವನ್ನು ವ್ಯಕ್ತಪಡಿಸುತ್ತಾ ಬರುತ್ತಾಳೆ. ಕೊನೆಗೊಂದು ಘಟನೆಯ ತರುವಾಯ ಆಕೆ ರಾಜನನ್ನೇ ನೋಡದಿರಲು ನಿರ್ಧರಿಸುತ್ತಾಳೆ. ಟೇಹು ಟೇಮಿಸ್‌ಗೆ ಕಿರಿಯ ರಾಣಿಯಲ್ಲಿ ಒಬ್ಬ ಮಗ ಜನಿಸಿದಾಗ ಜನತೆಗೆ ಎಲ್ಲಿಲ್ಲದ ಸಂಭ್ರಮ. ಆದರೆ ಟೇಹು ಟೇಮಿಸ್ ಹಾಗೂ ಹಾಟ್ ಷೇಪ್ ಸಿಟೂವಿಗೆ ತಮ್ಮ ಬದುಕಿನ ದುರಂತಗಳು ಗೊತ್ತಿದ್ದರಿಂದ ಸಹಜವಾಗಿಯೇ ಚಿಂತೆಗೀಡಾಗುತ್ತಾರೆ. ವಿಧಿವಶಾತ್ ರಾಜ ಟೇಹು ಟೇಮಿಸ್ ಜ್ವರದಿಂದ ಬಳಲಿದಾಗ ಸಂಪ್ರದಾಯ ಅಥವಾ ಆ ದೇಶದ ಪದ್ಧತಿಯಂತೆ ಹಿರಿಯ ಮಗಳು, ಕಿರಿಯ ಮಗ ರಾಜ ರಾಣಿಯರಾಗುವ ಸಂದರ್ಭ ಮತ್ತೊಮ್ಮೆ ಒದಗಿಬರುತ್ತದೆ. ಇದನ್ನು ಈಡೇರಿಸುವ ಉದ್ದೇಶದಿಂದ ಟೇಹು ಟೇಮಿಸ್ ಸೀಟೂಳನ್ನು ಬರಹೇಳುತ್ತಾನೆ. ಅವನ ಆಸೆಯಂತೆಯೇ ಹಿರಿಯ ರಾಣಿ ಹಾಟ್ ಷೇಪ್ ಸೀಟೂ ಅದಕ್ಕೆ ಒಪ್ಪಿಗೆಯನ್ನು ಸೂಚಿಸುತ್ತಾಳೆ. ಆಗ ಅವಳ ಮನಸ್ಸಿನಲ್ಲಿ ಒಡಮೂಡುವ ತುಮುಲ ಅರ್ಥಗರ್ಭಿತ; ಕಥೆಯಲ್ಲಿ ಮೂಡಿಬಂದಿರುವ ಸಿಟೂಳ ಮನಸ್ಸಿನ ತುಮುಲವನ್ನು ಇಲ್ಲಿ ಗಮನಿಸಬಹುದಾಗಿದೆ.

> "ಬರುತ್ತಾ ಅವಳ ಮನಸ್ಸು ಏತರದೋ ತುಮುಲದಲ್ಲಿ ತೊಳಲಿತು. ಈ ರಾಜ ಪದವಿಯ ಪಾಡೇ ಇಷ್ಟು. ತಾನು ಸಾಮಾನ್ಯ ಮನೆ ತನವೊಂದರಲ್ಲಿ ಹುಟ್ಟಿದ್ದರೆ ಒಬ್ಬ ಸಾಮಾನ್ಯ ಗೃಹಸ್ಥೆಯಾಗಿ ಎಷ್ಟು ಸುಖದಿಂದ ಬಾಳಬಹುದಾಗಿತ್ತು! ಪುಣ್ಯವಂತೆಯಾಗಿದ್ದರೆ ಈ ಕಿರಿಯ ರಾಣಿಯಂತೆ ಒಬ್ಬ ರಾಜನನ್ನು ಒಲಿಸಿ ರಾಣಿಯಾಗಿ ಬಾಳಬಹುದಿತ್ತು. ರಾಜನ ಮಗಳಾಗಿ ಹುಟ್ಟಿ ಈ ಪುಣ್ಯವನ್ನು ಕಳೆದು ಕೊಂಡದ್ದಾಯಿತು. ನನ್ನ ಹೊಟ್ಟೆಯಲ್ಲಿ ಹುಟ್ಟಿ ತನ್ನ ಮಗಳೂ ಇದೇ ಪಾಡಿಗೆ ಪಕ್ಕಾದಳು. ರಾಣಿಯ ಪಟ್ಟ ಉಂಟು. ಹೆಣ್ಣತನದ ಸುಖ ಇಲ್ಲ. ಆಯಿತು, ಇದು ದೇವರು ಮಾಡಿದ್ದು; ಆ ಇಚ್ಛೆಗೆ ಯಾರು ಅಡ್ಡಿ? ಇರುತ್ತಾ, ತನ್ನ ತಮ್ಮ ತನ್ನ ವಿಷಯಕ್ಕೆ ಚೆನ್ನಾಗಿಯೇ ನಡೆದುಕೊಂಡಿದ್ದನು. ಅವನ ಮಗ ತನ್ನ ಮಗಳನ್ನು ಇಷ್ಟರಮಟ್ಟಿಗೆ ನೋಡಿಕೊಂಡರೆ ಎಷ್ಟೋ ಆಯಿತು. ಈ ಹುಡುಗಿ ಈ ಹುಡುಗನನ್ನು ಈಜಿಪ್ಟಿನ ದೊರೆಮಕ್ಕಳಾಗಿ ಸೃಷ್ಟಿಸಿ ಅವರನ್ನು ದಂಪತಿಗಳಾಗಿ ಮಾಡಿದ ದೈವ ತನ್ನ ಮಗಳಿಗೆ ಜೀವನದಲ್ಲಿ ತನಗೆ ಕೊಟ್ಟಷ್ಟು ಸುಖವನ್ನಾದರೂ ಕೊಟ್ಟು ಅನುಗ್ರಹಿಸಬೇಕು"[7].

---

7. ಮಾ.ವೆಂ.ಅಯ್ಯಂಗಾರ್ : ಸಣ್ಣಕತೆಗಳು, ಸಂಪುಟ ೪ (ಎಂ.ಜಿ.ಪಿ.ಕೆ. ಟ್ರಸ್ಟ್, ಬೆಂಗಳೂರು ೧೯೯೦) ಪು.ಸಂ. ೧೮೧

ರಾಣಿಹಾಟ್ ಷೇಪ್ ಸಿಟೂ ಮನಸ್ಸಿನ ತುಮುಲಗಳನ್ನು ಮಾಸ್ತಿಯವರು ಅರ್ಥಮಾಡಿಕೊಳ್ಳವಲ್ಲಿ ಯಶಸ್ವಿಯಾಗಿದ್ದಾರೆ. ಒಂದು ಹೆಣ್ಣಿಗೆ ಸಿಗಬೇಕಾದ ಕೆಲವು ಅಗತ್ಯ ಸೌಖ್ಯಗಳು ಸಿಗದಾದಾಗ ಆಕೆ ಅನುಭವಿಸುವ ತಲ್ಲಣಗಳನ್ನು ಕಥೆಯ ಸಮರ್ಥವಾಗಿ ನಿರೂಪಿಸಿದೆ. ರಾಣಿ ಹಾಟ್ ಷೇಪ್‌ಸಿಟೂ ಕೆಲವೊಂದು ಜೀವನದ ಸುಖಗಳಿಂದ ವಂಚಿತಗಳಾದರೂ ಕೊನೆಗೆ ಪ್ರಭುತ್ವ ನಿರ್ವಹಿಸುವಲ್ಲಿ ಯಶಸ್ವಿಯಾಗುವುದರೊಂದಿಗೆ ತನ್ನ ಬಾಳನ್ನು ಮುಗಿಸುತ್ತಾಳೆ. ಈಜಿಪ್ಟ್ ದೇಶದ ಪದ್ಧತಿಯೊಂದಿಗೆ ರಾಣಿ ಹಾಟ್‌ಷೇಪ್ ಸಿಟೂವಿನ ಪ್ರಭುತ್ವ ನಿರ್ವಹಣೆಯ ಪಾತ್ರವನ್ನು ವಿವರಿಸುವಲ್ಲಿ ಮಾಸ್ತಿ ಎಲ್ಲಿಯೂ ಸಹ ಎಡವಿಲ್ಲ ಎಂದರೆ ತಪ್ಪಾಗಲಾರದು.

ಅಧ್ಯಾಯ : ಆರು

# ತಾಯ್ತನದ ಶೋಧ

- ನಳಿನಿಯ ತಂದೆ
- ಮೇಲೂರಿನ ಲಕ್ಷ್ಮಮ್ಮ
- ಚಟ್ಟೇಕಾರ ತಾಯಿ
- ಒಬ್ಬ ತಾಯಿ, ಮಗ

## ತಾಯ್ತನದ ಶೋಧ

ಹೆಣ್ಣಿನ ವಿಷಯದಲ್ಲಿ ಮಾಸ್ತಿಯವರಿಗೆ ಕನಿಕರ ಮಾತ್ರವಲ್ಲ, ಅಪಾರವಾದ ಗೌರವವೂ ಇದೆ. ಹೆಣ್ಣನ್ನು ಪ್ರೇಯಸಿ ಎಂಬ ದೃಷ್ಟಿಯಿಂದ ನೋಡಬಹುದು. ತಾಯಿ ಎಂಬ ದೃಷ್ಟಿಯಿಂದಲೂ ನೋಡಬಹುದು. ಮಾಸ್ತಿಯವರ ಕಥೆಗಳಲ್ಲಿ ಅನೇಕ ವೇಳೆ ಇವೆರಡೂ ದೃಷ್ಟಿಗಳು ಅಸಹಜತೆಯೇನೂ ಇಲ್ಲದೆ ಬೆರೆಯುತ್ತವೆ. ಮಾಸ್ತಿಯವರ ಕಥೆಗಳಲ್ಲಿ ತಾಯ್ತನದ ಭಾವನೆ ಮೇಲಕ್ಕೆ ಮೇಲಕ್ಕೆ ಏರುತ್ತದೆ. ಹೆಣ್ಣನ್ನು ಲೋಕಮಾತೆ, ಆದಿಶಕ್ತಿ, ದೇವಿಯ ಅವತಾರ – ಎನ್ನುವಂತೆ ಚಿತ್ರಿಸಿದ್ದಾರೆ. ಹೆಣ್ತನದ ನಿಷ್ಕರ್ಷೆಯಲ್ಲಿ ತಾಯ್ತನವು ಬಹಳ ಪ್ರಮುಖ ಸ್ಥಾನವನ್ನು ಪಡೆಯುತ್ತದೆ. ಹೆಣ್ಣುತನದ 'ಮೂಲಭೂತ ಸತ್ವ'ವೆನ್ನಲಾದ ತಾಯ್ತನದ ಅಭಿವ್ಯಕ್ತಿಯು ವಿವಾಹ – ಸಂಸಾರದ ನೀತಿ ನಿಯಮಗಳಿಗೆ ಒಳಪಟ್ಟಿತ್ತು. ತಾಯ್ತನದ ಭಾವನೆಗಳನ್ನು ಮಾಸ್ತಿಯವರ ಹಲವು ಕಥೆಗಳು ಚಾಚಾತಪ್ಪದೆ ಪುನರುಚ್ಚರಿಸಿದರೂ, ಆ ಉಚ್ಚಾರಣೆಯ ಸಂದರ್ಭಗಳಲ್ಲಿನ ವೈರುಧ್ಯದಿಂದಾಗಿ ವಿಚಾರಗಳು ಹೊಸ ತಿರುವನ್ನು ಪಡೆಯುತ್ತವೆ. 'ಚಂದ್ರವದನಾ' ಕಥೆಯಲ್ಲಿ ಚಂದ್ರವದನೆ ವೇಶ್ಯೆಯಾಗಿ, ಅನೈತಿಕ ಸಂಬಂಧದಿಂದ ತಾಯ್ತನದ ಪ್ರಾಪ್ತಿಯನ್ನು ಪಡೆದರೂ ಅವಳಿಷ್ಟಕ್ಕೆ ನಡೆದುಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುತ್ತದೆ. ಅವಳು ತನ್ನ ಹೊಟ್ಟೆಯಲ್ಲಿ ಬೆಳೆಯುವ ಮಗುವನ್ನು ಉಳಿಸಿಕೊಳ್ಳಲು ಬೇರೊಬ್ಬರ ಸಹಾಯವನ್ನು ಯಾಚಿಸುವ ಸಂದರ್ಭವನ್ನು ನೋಡಬಹುದು. ವೇಶ್ಯೆಯಾದರೂ ತನ್ನ ಮಗುವಿನ ಭವಿಷ್ಯಕ್ಕಾಗಿ ತಾಯ್ತನದ ಪ್ರೀತಿಯನ್ನು ಧಾರೆಯೆರೆಯುವ ಸನ್ನಿವೇಶ ನಿಜಕ್ಕೂ ಓದುಗರ ಮನಸ್ಸನ್ನು ನಾಟುತ್ತದೆ.

ಲೋಕದಲ್ಲಿ ಹಣವೊಂದಿದ್ದರೆ ಏನು ಬೇಕಾದರೂ ಪಡೆಯಬಹುದು. ಆದರೆ ತಾಯಿಯ ಪ್ರೀತಿಯನ್ನು ಮಾತ್ರ ಬೆಲೆಕೊಟ್ಟು ಖರೀದಿಸಲು ಸಾಧ್ಯವಾಗದ್ದು. ಲೋಕದ ದೃಷ್ಟಿಯಲ್ಲಿ ಕೆಟ್ಟವನಾದವನು ತಾಯಿಯ ದೃಷ್ಟಿಯಲಿ ಮಾತ್ರ ಹಾಗೆ ಕಾಣುವುದೇ ಇಲ್ಲ. ಸಂಸಾರವೆಂಬ ನೌಕೆ ನಿಯಮಿತವಾಗಿ ನಡೆದರೆ ತಾಯಿ ಪ್ರೇಮಕ್ಕೆ ಅಡಚಣೆಯಾಗಲಾರದು. ಒಂದು ವೇಳೆ ಆಕೆ ವೇಶ್ಯೆಯಾದಗಲೋ, ಗಂಡನಿಂದ ತಿರಸ್ಕೃತಳಾದಾಗಲೋ, ಲೋಕವೇ ಅನುಮಾನಿಸಿದ ಸಂದರ್ಭದಲ್ಲೋ ತಾಯಿಯಾದವಳು ಪಡುವ ಯಾತನೆ ಅಷ್ಟಿಷ್ಟಲ್ಲ. ಅವಳು ತನ್ನ ಮಗುವಿನ ಭದ್ರ ಭವಿಷ್ಯತ್ತಿಗಾಗಿ ಎಂತಹ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ. ಸಾವಿಗೂ ಸಹ ಶರಣಾಗಿಬಿಡುತ್ತಾಳೆ. ಸ್ತ್ರೀಯು ಎಂದಿಗೂ ಸಹ ವಿವೇಕರಹಿತಳಾಗಿ ಪುರುಷನ ಅಧೀನದಲ್ಲಿ ಬಿದ್ದಿದ್ದು ಅವನ ಮನೋವಿನೋದ ಪಡಿಸಿ, ಅವನಿಗೆ ಆಭರಣದಂತಿರಬೇಕೆಂದು ಅವಳು ಭಯಸುವುದಿಲ್ಲ. ಆಕೆಯ ತನ್ನ ಜೀವತಕಾಲದಲ್ಲಿ ನಡೆಸಬೇಕಾದ ಅನೇಕ ಉತ್ತರಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಇತರರನ್ನು

ಸನ್ಮಾರ್ಗದಲ್ಲಿ ನಡೆಯುವಂತೆ ಅವರನ್ನು ಶಿಕ್ಷಿಸಿ, ದಯಾರ್ದ್ರಮಾನಸರಾಗುವಂತೆ ಮಾಡುವುದಕ್ಕಾಗಿಯೇ ಸ್ತ್ರೀಯು ಸೃಷ್ಟಿಸಲ್ಪಟ್ಟಿದ್ದಾಳೆ ಎನ್ನುವ ರೀತಿಯಲ್ಲಿ ಮಾಸ್ತಿಯವರು ಹೆಣ್ಣಿನ ತಾಯ್ತನದ ಬಗ್ಗೆ ಚಿಂತಿಸಿರುವುದುಂಟು.

ಸಮಾಜದಲ್ಲಿ ಶ್ರೀಮಂತ ವರ್ಗ, ಉನ್ನತ, ಮಧ್ಯಮ ವರ್ಗ ಯಾವುದೇ ವರ್ಗವಾಗಿರಲಿ, ಸ್ತ್ರೀಯಾದವಳಿಗೆ ಎಷ್ಟೇ ಅಹಂಕಾರ ದರ್ಪಗಳಿರಲಿ ಅವಳು ತಾಯ್ತನದ ಸಂದರ್ಭದಲ್ಲಿ ಮಾತ್ರ ಮೃದುವಾಗಿಬಿಡುತ್ತಾಳೆ. ಹುಟ್ಟುವ ಮಗು ಕುರುಡಿಯಾಗಲಿ, ಕುರೂಪಿಯಾಗಲಿ, ಯಾವುದಾದರೂ ಸರಿಯೆ ಅವಳಿಗೆ ಮಾತ್ರ ಅದು ಮುದ್ದಾಗಿಯೇ ಕಾಣಿಸುತ್ತದೆ. ಇಡೀ ಜೀವನವನ್ನು ಅದರ ಲಾಲನೆ ಪಾಲನೆಯಲ್ಲಿಯೇ ಕಳೆಯಲು ತಾಯಾದವಳು ಬಯಸುವುದು ಸಹಜ ಮಾಸ್ತಿಯವರು ಬರೆದಂತಹ ಕತೆಗಳಲ್ಲಿ 'ನಳಿನಿಯ ತಂದೆ', 'ಮೇಲೂರಿನ ಲಕ್ಷ್ಮಮ್ಮ', 'ಚಟ್ಟೇಕಾರ ತಾಯಿ', ಒಬ್ಬ ತಾಯಿ, ಮಗ', ಮುಂತಾದ ಕಥೆಗಳಲ್ಲಿ ತಾಯ್ತನದ ಶೋಧವನ್ನು ಗಮನಿಸಬಹುದಾಗಿದೆ. ಮೇಲೆ ತಿಳಿಸಿದಂತಹ ಕಥೆಗಳು ಮಾತ್ರ ತಾಯ್ತನಕ್ಕೆ ಕನ್ನಡಿಹಿಡಿದಿರುವಂತಹವು ಎಂದು ಕಡಾಖಂಡಿತವಾಗಿ ಗೆರೆ ಎಳೆದು ವಿಭಾಗಿಸುವುದು ಸರಿಯಾದ ಕ್ರಮವಲ್ಲ, ಅವರ ಅನೇಕ ಕತೆಗಳಲ್ಲಿ ತಾಯ್ತನದ ಶೋಧವನ್ನು ಹುಡುಕಬಹುದಾಗಿದೆ. ಆದರೆ ಪ್ರಸ್ತುತದಲ್ಲಿ ನಾಲ್ಕಾರು ಕಥೆಗಳನ್ನು ಮಾತ್ರ ವಿಶ್ಲೇಷಣೆಗೆ ತೆಗೆದುಕೊಂಡಿರುತ್ತೇನೆ.

➢ **ನಳಿನಿಯ ತಂದೆ**

ಎಂದೋ ಹಾದಿ ತಪ್ಪಿದ ನಡೆತೆಯಿಂದಾಗಿ ಕೈ ಹಿಡಿದ ಹೆಂಡತಿಯನ್ನು ಬಾಳಿನ ವಸಂತದಲ್ಲೇ ವಂಚಿಸಿ ಪತನದತ್ತ ಸಾಗಿ, ಕೊನೆಗಾಲದಲ್ಲಿ ಪಿತೃಹೃದಯವನ್ನು ಪ್ರದರ್ಶಿಸಿ ತನ್ನ ಅದುವರೆಗಿನ ದುಶ್ಚಾರಿತ್ರ್ಯಕ್ಕೆ ಪಾಶ್ಚತ್ತಾಪಗೊಂಡ ವ್ಯಕ್ತಿಯೊಬ್ಬನ ಕರುಣಾಜನಕ ಪ್ರಸಂಗ 'ನಳಿನಿಯ ತಂದೆ', ಕಥೆಯ ನಾಯಕಿ ಲಕ್ಷ್ಮೀ ತಕ್ಕ ಮಟ್ಟಿಗೆ ಓದಿದವಳು; ಸ್ವಭಾವದ ಬಲದಿಂದ ಮಾತ್ರವಲ್ಲದೆ ವಿಚಾರಶಕ್ತಿಯಿಂದಲೂ ತನ್ನ ಸಮಸ್ಯೆಯನ್ನು ಪರಿಶೀಲಿಸಿ, ತನ್ನ ಜೀವನ ರಥ ಹೇಗೆ ಸಾಗಬೇಕು ಎಂದು ಮನಸ್ಸಿನಲ್ಲೇ ಚಿಂತಿಸಿ ಅದರಂತೆ ನಡೆದವಳು.

ಲಕ್ಷ್ಮಮ್ಮನ ತಂದೆ ರಾಮನಾಥ ಅಯ್ಯರ್ ತಕ್ಕಷ್ಟು ಆದಾಯವುಳ್ಳ ಒಬ್ಬ ಲಾಯರು. ಆದ್ದರಿಂದಲೇ ಒಬ್ಬ ತಕ್ಕ ವರನನ್ನು ಹುಡಿಕಿ ಒಬ್ಬಳೇ ಮಗಳಾದ ಲಕ್ಷ್ಮಿಗೆ ವಿವಾಹಮಾಡಬೇಕೆಂದು ಯೋಚಿಸಿ, ಕೊನೆಗೆ ದೂರದ ಸಂಬಂಧಿಯಾದ ವಿಶ್ವನಾಥನಿಗೆ ತನ್ನ ಮಗಳನ್ನು ದಾರೆಯೆದರು. ವಿಶ್ವನಾಥ ರಾಮನಾಥ ಅಯ್ಯರ ಊಹೆಯನ್ನು ನಿಜವಾಗಿಸಲಿಲ್ಲ. ಲಕ್ಷ್ಮಿಗೆ ಆತ ತಕ್ಕ ಗಂಡನಾಗಲಿಲ್ಲ. ಬಿ.ಎ ಮುಗಿಸಿ ಬರುತ್ತೇನೆಂದು ಹೇಳಿ ಸೂಳೆಯರ ಸಹವಾಸಕ್ಕೆ ಬಿದ್ದ ಪರೀಕ್ಷೆಯಲ್ಲಿ ಫೇಲಾದ ರಾಮನಾಥ ಅಯ್ಯರ್

ಲಕ್ಷ್ಮಿಯನ್ನು ಗಿಣಿಯಂತೆ ಸಾಕಿ ಗಿಡುಗನ ಕೈಗೆ ಕೊಟ್ಟಂತಾಯಿತು. ವಿಶ್ವನಾಥ ಲಕ್ಷ್ಮಿಯೊಂದಿಗೆ ಸಂಸಾರದಲ್ಲಿ ಹೊಸ ರುಚಿಯ ತರುಣನಂತೆ ಎಂದೂ ವರ್ತಿಸಲಿಲ್ಲ. ಲಕ್ಷ್ಮಿಗೆ ತನ್ನ ಬದುಕು ಹೀಗಾಯಿತಲ್ಲಾ ಎನ್ನುವ ಯೋಚನೆ ಸದಾ ಕಾಡುತ್ತಿತ್ತು ವಿಶ್ವನಾಥನು ಬಿ.ಎ ಫಾಸು ಮಾಡುವುದು ಅಸಾಧ್ಯ ಎನಿಸಿದಾಗ ಲಕ್ಷ್ಮಿಯನ್ನು ಬಂದು ಕೂಡಿದ. ಲಕ್ಷ್ಮಿಗೆ ಒಂದು ಹೆಣ್ಣು ಮಗುವಾಯಿತು. ಅದರ ಹೆಸರೇ ನಳಿನಿ. ಲಕ್ಷ್ಮಿಗೆ ತನ್ನ ಗಂಡನ ವರ್ತನೆಗಳೆಲ್ಲಾ ತಿಳಿದಿದ್ದವು. ಆತ ವೇಶ್ಯೆಯರ ಸಹವಾಸದಿಂದ ಮಾವನ ಆಸ್ತಿಯನ್ನು ಪೋಲು ಮಾಡಿದ. ಆದರೂ ಲಕ್ಷ್ಮಿ ಸ್ವಲ್ಪ ಕಾಲ ಸಂಯಮದಿಂದಲೇ ವರ್ತಿಸಿದಳು. ಗಂಡನ ವರ್ತನೆ ಅತಿರೇಕಕ್ಕೆ ಹೋದಾಗ "ಲಕ್ಷ್ಮೀಯ ಮನಸ್ಸು ಕಲ್ಲಾಯಿತು, ಉಕ್ಕಾಯಿತು........ ನೀವು ನನ್ನ ಒಡವೆಯನ್ನು ಕದ್ದು ನಿಮ್ಮ ವೇಶ್ಯೆಗೆ ಕೊಟ್ಟಿರಿ ಎಂದು ಜನ ಹೇಳುತ್ತಿದ್ದಾರೆ. ಇದು ನಿಜವೇ"? ಎಂದು ಕೇಳಿದಾಗ ವಿಶ್ವನಾಥ ಕೈ ಬೀಸಿ ಅವಳ ಕೆನ್ನೆಗೆ ಹೊಡೆದನು. ಲಕ್ಷ್ಮೀ ಪೆಟ್ಟನ್ನು ತಿಂದಳು. ನಿಂದಲ್ಲಿ ಅಲುಗದೆ ನಿಂತಳು. "ನಾನು ಕೇಳಿದ್ದಕ್ಕೇ ಏನು ಉತ್ತರ"? ಎಂದಳು......... "ಒಳ್ಳೆಯದು ಬಾಯಲ್ಲಿ ಒಪ್ಪಿಕೊಳ್ಳಲಿಲ್ಲ, ಕೈಯಲ್ಲಿ ಒಪ್ಪಿಕೊಂಡಿರಿ, ಹೋಗಿ ನಿಮ್ಮ ಗೆಳತಿ ಯಾರು ಅವಳೊಂದಿಗೆ ಸುಖವಾಗಿ ಬಾಳಿ". (ಸಣ್ಣ ಕತೆಗಳು:ಸಂಪುಟ ೩ ಪು.ಸಂ. ೬೮) ಎಂದು ಗಂಡನನ್ನು ಮನೆಯಿಂದ ಆಚೆ ಕಳಿಸಿದರೂ, ಗಂಡನಾದ್ದರಿಮದ ಅವನ ಜೀವನಾಂಶಕ್ಕೆ ದಾರಿಯನ್ನು ಸಹ ಮಾಡಿದಳು. ಇಷ್ಟಾದರೂ ವಿಶ್ವನಾಥ ಅವಳಿಗೆ ಕೊಟ್ಟ ಸಂಕಟ ಅಷ್ಟಿಷ್ಟಲ್ಲ. "ಗಂಡನನ್ನು ಬಿಟ್ಟಿರುವ ಶ್ರೀಮತಿ.......ವರು ತನ್ನನ್ನು ಮದುವೆಯಾಲು ಇಷ್ಟವಿರುವ ಯಾನನೊಡನೆಯೂ ಕೂಡುವುದಕ್ಕೆ ಸಿದ್ಧವಾಗಿದ್ದಾರೆ. ತಾವು ಅಗತ್ಯ ಬಂದು ಆಶೀರ್ವಾದ ಮಾಡಬೇಕು", ಎಂದು ಅರಿಶಿನ ಹಚ್ಚಿದ ಕಾಗದ ಬಂತು. ಲಕ್ಷ್ಮಮ್ಮ ಅದಕ್ಕೆ ಕಿವಿಗೊಡಲಿಲ್ಲ. ಮತ್ತೆ ಒಂದು ಫಾರ್ಸಲ್ ಹಾಗೂ ಕಾಗದ ಬಂತು ಅವರಲ್ಲಿ ವಿಧವೆಯರು ಉಡುವ ಸೀರೆ ಬಂದಿತ್ತು. ಕಾಗದದಲ್ಲಿ "ನೀನು ಬಯಸುವ ಸ್ಥಿತಿ ನಿಗಗೆ ಬೇಗನೆ ಬರಲೆಂದು ಆಶೀರ್ವಾದ ಮಾಡಿ ಇದನ್ನು ಕಳುಹಿಸಿದೆ". ಎಂದು ಬರೆದಿತ್ತು. ಲಕ್ಷ್ಮಮ್ಮ ತುಂಬಾ ಯೋಚಿಸಿ ಗಂಡನಾದವನಿಗೆ ತಿಳಿಯದಂತೆ ಬಹು ದೂರ ಬದುಕಲು ನಿಶ್ಚಯಿಸಿದಳು. ಲಕ್ಷ್ಮಮ್ಮನ ಪ್ರತಿ ನಿರ್ಧಾರದಲ್ಲೂ ಆಕೆಯ ಮಗಳಾದ 'ನಳಿನಿ'ಯ ಭವಿಷ್ಯ ಅಡಗಿತ್ತು. ಲಕ್ಷ್ಮಮ್ಮ ಮದುವೆಯಾದ ಮೇಲೆ ಗಂಡನಿಂದ ಸುಖವೇನು ಕಾಣಲಿಲ್ಲ. ಆದರೂ ತನಗಿಲ್ಲದ ಸುಖ ಶಾಂತಿ ತನ್ನ ಮಗಳಿಗಾದರೂ ಸಿಗಲಿ ಅನ್ನುವ ಹಂಬಲ ಅವಳಲ್ಲಿತ್ತು. ಲಕ್ಷ್ಮಮ್ಮ ಗಂಡನನ್ನು ಸಂಪೂರ್ಣ ತಿರಸ್ಕರಿಸಲಿಲ್ಲ. ಆದರೆ ಮಗಳ ಮುಂದಿನ ಭವಿಷ್ಯದ ದೃಷ್ಟಿಯಿಂದ ದೂರ ಹೋಗಿ ಬದುಕಲು ನಿಶ್ಚಯಿಸದಳು. ಗಂಡ ತನ್ನ ಭಾಗಕ್ಕಿಲ್ಲವೆಂಬುದು ನಿಶ್ಚಿತವಾದಾಗ, ವ್ಯಾಸಾಂಗ ಮಾಡಿ ಮೆಟ್ರಿಕ್ಯುಲೇಷನ್ ಮುಗಿಸಿ ಉಪಾಧ್ಯಾಯನಿಯಾಗಿ ಮಗಳನ್ನು ಸಾಕಿದ ಲಕ್ಷ್ಮಮ್ಮನ ದಿಟ್ಟತನ, ಗಾಂಭೀರ್ಯ, ಸ್ಥೈರ್ಯಗಳು ತುಂಬ ಮಹತ್ವದವು. ಆಕೆ ಪ್ರತಿ

ನಿರ್ಣಯದ ಸನ್ನಿವೇಶದಲ್ಲಿ ಎಲ್ಲೂ ದುಡುಕಲಿಲ್ಲ. ಸಮರ್ಥವಾದ ದಿಟ್ಟ ಹೆಜ್ಜೆಯನ್ನೇ ಇಟ್ಟಳು ಮಗಳ ಬಾಳನ್ನು ಬೆಳಕಾಗಿಸಿದಳು.

ವಿಶ್ವನಾಥ ಕೊನೆಗಾಲದಲ್ಲಿ ತನ್ನ ತಪ್ಪೊಪ್ಪಿಕೊಂಡು, ಒಮ್ಮೆಯಾದರೂ ಅಳಿಯ ಮಗಳನ್ನು ಕಣ್ತುಂಬ ನೋಡಿ ಕೈಯಾರೆ ಸ್ಪರ್ಶಿಸುವ ಭಾಗ್ಯವನ್ನು ಅನುಗ್ರಹಿಸೆಂದು ಹೆಂಡತಿಯನ್ನು ಬೇಡುತ್ತಾನೆ. ಇದೇ ರೀತಿಯ ಯೋಚನೆ ಅವನಿಗೆ ಹತ್ತಾರು ವರ್ಷಗಳ ಹಿಂದೆ ಬಂದಿದ್ದರೆ ಜೀವನ ಸುಖಮಯವಾಗಿರುತ್ತಿತ್ತು. ಆದರೆ ಆತ ಎಲ್ಲಾ ರೀತಯಿಂದಲೂ ತನ್ನ ಹೆಂಡತಿಯನ್ನು ಮತ್ತೊಮ್ಮೆ ಕೂಡುವಲ್ಲಿ ಅಸಾಧ್ಯವಾಗಿಸಿಕೊಂಡುಬಿಟ್ಟಿದ್ದಾನೆ. ವಿಶ್ವನಾಥ 'ನಳಿನಿ'ಗೆ ತಂದೆಯಾದರೂ ತಂದೆಯ ಸ್ಥಾನದಲ್ಲಿ ನಿಂತು ಮಗಳನ್ನು ಆಶೀರ್ವದಿಸಲು ಸಾಧ್ಯವಾಗಲಿಲ್ಲ. ಹಿರಿಯರ ಸ್ಥಾನದಲ್ಲಿ ನಿಂತು 'ನಳಿನಿ'ಗೆ ಆಶೀರ್ವಾದ ಮಾಡಿ ಅವನ ಆಸೆಯನ್ನು ತೀರಿಸಿಕೊಳ್ಳುವ ಪರಿಸ್ಥಿತಿ ಒದಗಿಬರುತ್ತದೆ. ಲಕ್ಷ್ಮಮ್ಮ ತನ್ನ ಮನೆಯಲ್ಲಿ ಹೊರಗಿನವನಂತೆ ಒಂದು ತಿಂಗಳು ಉಳಿದುಕೊಳ್ಳಲು ಅನುವು ಮಾಡಿಕೊಡುತ್ತಾಳೆ. ಆತ ಮನೆಯಲ್ಲಿ ಹೊರಗಿನವನಾಗಿಯೇ ಉಳಿದು, ಹೋಗುವಾಗ – ಉದ್ವೇಗವಿಲ್ಲದೆ ಶಾಂತಮನಸ್ಸಿನವನಾಗಿ "ನಿನ್ನ ನಿಶ್ಚಯ ಸರಿಯೆಂದು ಕಾಣುತ್ತದೆ. ನೀನು ನನ್ನನ್ನು ಇನ್ನು ನೋಡುವುದಿಲ್ಲ..... ನಾನು ನೀನು ಪಡದೆ ಉಳಿಸಿಟ್ಟ ಸಂಸಾರ ಸುಖ ಮಗಳಿಗೆ ಲಭಿಸಲಿ, ನಿನಗೂ ಜೀವನದಲ್ಲಿ ಸಮಾಧಾನ ದೊರೆಯಲಿ" ಎಂದು ಲಕ್ಷ್ಮಿಗೆ ಕಾಗದ ಬರೆದ. ವಿಶ್ವನಾಥ ಈ ಮೊದಲು ಎಷ್ಟೋ ಕಾಗದಗಳನ್ನು ಬರೆದಿದ್ದ ಅವೆಲ್ಲ ಹೆಂಡತಿಗೆ ಕಷ್ಟವನ್ನು ಕೊಡುವ ಸಲುವಾಗಿಯೇ ಬರೆದಂತಹವು ಕೊನೆಯ ಪತ್ರ ಮಾತ್ರ ಲಕ್ಷ್ಮಿಯ ಜೀವನದಿಂದ ಹೊರಬಿದ್ದದ್ದಕ್ಕೆ ಅದು ಸಂಕೇತವಾಯಿತು.

ಮಾಸ್ತಿಯವರು ಈ ಕತೆಯಲ್ಲಿ ಪ್ರತಿ ಪಾತ್ರವನ್ನು ಅತ್ಯಂತ ಜಾಗರೂಕವಾಗಿ ಚಿತ್ರಿಸಿದ್ದಾರೆ. ಲಕ್ಷ್ಮಿಯ ಪಾತ್ರವಂತೂ ಹೃದಯ ಕಲಕುವ ರೀತಿಯಲ್ಲಿ ರಚಿತವಾಗಿದೆ. ಆಕೆ ತನ್ನ ಜೀವನವನ್ನು ರೂಪಿಸಿಕೊಂಡ ರೀತಿ, ಗಂಡನೊಂದಿಗೆ ನಿಷ್ಠುರತೆಯ ಜೊತೆಗೆ ಆಕೆ ತೋರುವ ಕನಿಕರ, ಮಗಳ ಭವಿಷ್ಯದ ಬಗ್ಗೆ ತೆಗೆದುಕೊಂಡ ನಿರ್ಣಯಗಳು – ಎಲ್ಲವೂ ಸೊಗಸಾಗಿ ಬೆರೆದಿವೆ. ಕಥೆಯ ಕೊನೆ ಕೊನೆಗೆ ಲಕ್ಷ್ಮಿ ಮತ್ತು ವಿಶ್ವನಾಥರನ್ನು ಒಂದು ಗೂಡಿಸಿ ಸುಖಾಂತಗೊಳಿಸಬಹುದಾಗಿತ್ತು ಎಂದೆನಿಸಿದರೂ, ಕಥೆಗೆ ಕೊಟ್ಟಿರುವ ಮುಕ್ತಾಯ ಪಾತ್ರಗಳ ಸ್ವಭಾವಕ್ಕೂ ಸಂದರ್ಭಕ್ಕೂ ಕತೆಯಲ್ಲಿರಬೇಕಾದ ತರ್ಕಕ್ಕೂ ಅನುಗುಣವಾಗಿದೆ. ಡಾ.ಎಚ್.ಜೆ. ಲಕ್ಕಪ್ಪಗೌಡರು ಸಾಹಿತ್ಯ ಬಹುಮುಖಿ ಚಿಂತನೆ' ಕೃತಿಯಲ್ಲಿ 'ನಳಿನಿಯ ತಂದೆ' ಕಥೆಯನ್ನು ಕುರಿತು ಈ ರೀತಿ ಅಭಿಪ್ರಾಯ ಪಡುತ್ತಾರೆ. "ಕತೆಯ ಆದಿ ಅಂತ್ಯಗಳು ಅನಾವಶ್ಯಕ ಲಂಬನವಿಲ್ಲದೆ ಉಚಿತ ಮಾತುಗಾರಿಕೆಯಿಂದ ಪ್ರಭಾವಕಾರಿಯಾಗಿ ಚಿತ್ರಿಸಲ್ಪಟ್ಟಿವೆ. ಮಾಸ್ತಿಯವರು ಕೇವಲ ಕತೆ ಹೇಳುವುದಿಲ್ಲ. ಅ

ವಸ್ತುಗಳ ಪಾತ್ರಗಳ ಸನ್ನಿವೇಶಗಳ ಅಂತರ್ಯವನ್ನೇ ಬಿಚ್ಚಿ ನಮ್ಮ ಮುಂದೆ ಇಡುತ್ತಾರೆ. ಎಂಬುದಕ್ಕೆ ಈ ಕಥೆ ಸುಂದರ ನಿದರ್ಶನವಾಗಿದೆ". ಕಥೆಯ ಪಾತ್ರಗಳು ನಿರೂಪಿತವಾಗಿರುವ ದೃಷ್ಟಿಯಿಂದ ಅವರ ಈ ಮಾತುಗಳು ಅರ್ಥಗರ್ಭಿತ ಎನಿಸುತ್ತವೆ.

### ➢ ಮೇಲೂರಿನ ಲಕ್ಷ್ಮಮ್ಮ

"ನಮ್ಮ ಮಗುವಿಗೆ ಈ ಹೊತ್ತು ಆರತಿ ಅಕ್ಷತೆ ..."

"ನೀವೆಲ್ಲಾ ಬನ್ನಿ ಅಮ್ಮಾ, ಬರದೆ ಇರಬೇಡಿ, ಸುಮಂಗಲೀರು ಬಂದು ಹರಿಸಿ; ಅವನಿಗೆ ಒಳ್ಳೆಯದಾಗಲಿ......"

"ಅಮ್ಮಾ ನರಸಮ್ಮ ಯಾಕಮ್ಮ ನಗುತೀರ? ಕುರುಡು ಮಗುವಿಗೆ ಏನು ಒಳ್ಳೇದಾಗೋದು ಎಂತಲೇ ತಾಯಿ? ಅಮ್ಮಾ ಮಗು ಕುರುಡಾದರೇನು? ಮಗು ಅಲ್ಲವೇನಮ್ಮಾ? ನಾನು ಅದನ್ನು ಎತ್ತಿ ಕೊಂಡಿದ್ದರೆ ನೆರೆಮನೆ ಸಾಕಮ್ಮನವರ ಗಂಡ ಯಶೋಧ ಕೃಷ್ಣನ್ನ ಎತ್ತಿಕೊಂಡು ಕುಳಿತ್ತಿದ್ದಾಳೆ ಎನ್ನುತ್ತಾರೆ....... ಕುರುಡು ಯಶೋಧೆ ಕರುಡು ಕೃಷ್ಣನ ಎತ್ತಿಕೊಂಡಿದಾಳೆ ಎಂತೀರಾ ಅಮ್ಮಾ, ಹೋಗಲಿಬಿಡಿ, ಕುರುಡು ಅಲ್ಲ ಅಂದರೆ ಹೋಗುತ್ತೆಯೇ? ನಾವು ಕೇಳೀ ಬಂದದ್ದು ಸುಮಂಗಲೀರು ಬಂದು ನಮ್ಮಮ್ಮನ ಹರಿಸಿದ್ದರೆ ನನಗೆ ಕಣ್ಣೆರುತ್ತಿತ್ತು ನಾನು ಸರಿಯಾಗಿ ದೇವರ ಪೂಜೆ ಮಾಡಿದ್ದರೆ ನಮ್ಮ ಮಗನಿಗೆ ಕಣ್ಣಿರುತ್ತಿತ್ತು. ನೀವು ಬಂದು ಈ ಹೊತ್ತು ಮಗವನ್ನು ಚೆನ್ನಾಗಿ ಹರಿಸಿ. ಕಣ್ಣಿಲ್ಲದಿದ್ದರೆ ಹೋಗಲಿ ಚೆನ್ನಾಗಿ ಬದುಕಲಿ"[1].

ಈ ಮಾತುಗಳು ಹುಟ್ಟು ಕುರುಡಿ ಲಕ್ಷ್ಮಮ್ಮನವು ಆಕೆ ಬುದಿಭ್ರಮೆಗೊಂಡು ಮೇಲಿನ ಮಾತುಗಳನ್ನಾಡಿದರೂ, ಆಕೆ ಜೀವತ ಕಾಲದಲ್ಲಿ ಅನುಭವಿಸಿರುವ ನೋವು ಗೊತ್ತಾಗುತ್ತದೆ. ಹೆಣ್ಣಾದವಳು ಕುರುಡಿಯಾಗಿ ಹುಟ್ಟಿದರೆ ಲೋಕ ನೋಡುವ ರೀತಿಯೇ ಬೇರೆ. ಹೀಗಿರುವಾಗ ಕುರುಡಿಯಾದವಳನ್ನು ಮದುವೆಯಾದ ಗಂಡನಿಂದ ಹಿಡಿದು, ಅತ್ತೆ – ಮಾವಂದಿರೆಲ್ಲಾ ತಿರಸ್ಕಾರದ ಭಾವನೆಯಿಂದ ನೋಡಿದಾಗ ಆಕೆಯ ನೋವು ಮುಗಿಲು ಮುಟ್ಟುತ್ತದೆ. ಹುಟ್ಟು ಕುರುಡಿಯಾದರೂ ಲಕ್ಷ್ಮಮ್ಮ ಗುಣಸಂಪನ್ನೆ. ಅವಳನ್ನು ಕಂಡರೆ ತಂದೆಯಾದವನಿಗೆ ಎಲ್ಲಿಲ್ಲದ ಅಕ್ಕರೆ. ಆದ್ದರಿಂದಲೇ ಲಕ್ಷ್ಮಮ್ಮನನ್ನು ಅಕ್ಕರೆಯ ಮಗಳಾಗಿ ಬೆಳಸುತ್ತಾನೆ. ಅಣ್ಣ ನರಸಿಂಹಯ್ಯನ ವಾತ್ಸಲ್ಯದಿಂದ ಲಕ್ಷ್ಮಮ್ಮ ಗಂಡನನ್ನೂ ಕೂಡುತ್ತಾಳೆ. ಒಡಹುಟ್ಟಿದ ಮನೆಯಲ್ಲಿ ಕುರುಡಿಯಾದರೂ ಸಂತೋಷದಿಂದ ಬದುಕಿದ ಲಕ್ಷ್ಮಮ್ಮನಿಗೆ ಗಂಡನ ಮನೆಗೆ ಹೋದ ನಂತರ ಕಷ್ಟಗಳು ಒಂದರಮೇಲೊಂದರಂತೆ ಬಂದೆರಗುತ್ತವೆ. ಕುರುಡಿ ಎನ್ನುವ ಒಂದೇ ಒಂದು ಕಾರಣಕ್ಕೆ ಗಂಡನಾದವನು ಅವಳನ್ನು

---

1. ಮಾ.ವೆಂ.ಅಯ್ಯಂಗಾರ್ : ಸಣ್ಣಕತೆಗಳು, ಸಂಪುಟ ೨ (ಎಂ.ಜೆ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೧, ೨

ಕಾಣುವ ರೀತಿ ಮರುಕ ಹುಟ್ಟಿಸುತ್ತದೆ. ಇಷ್ಟೆಲ್ಲಾ ನೋವನ್ನು ಅನುಭವಿಸುವ ಲಕ್ಷ್ಮಮ್ಮನಿಗೆ ಸರದಿಪ್ರಕಾರ ಕುರುಡು ಮಕ್ಕಳೇ ಜನಿಸುತ್ತಾರೆ. ಆಗ ಅತ್ತೆ-ಮಾವ-ಗಂಡಂದಿರಿಂದ ಅವಳು ಅನ್ನಿಸಿಕೊಂಡ ಮಾತುಗಳನ್ನು ಲಕ್ಷಿಸದೆ ಮಕ್ಕಳ ಪ್ರೇಮದಿಂದ ತಾಳಿಕೊಂಡು ಜೀವನ ಸಾಗಿಸುತ್ತಾಳೆ. ಗಂಡನ ಏಟಿಗೆ ತುತ್ತಾಗಿ ಮಗ ಮಡಿದಾಗ ಆಕೆಯು ಪಡುವ ಯಾತನೆ, ಬವಣೆ ಅಷ್ಟಿಷ್ಟಲ್ಲ. ತನ್ನಂತೆ ಹುಟ್ಟು ಕುರುಡಿಯಾದ ಮಗಳಿಗೆ ಆಕೆಯು ಬೋಧಿಸುವ ಅನುಭವದ ಸುಖಸಂಸಾರದ ಮಾರ್ಗದರ್ಶನದ ಮಾತುಗಳು ಗಮನಾರ್ಹ;

> "ಅಲ್ಲವೇ ಮೊದ್ದು ಹುಡುಗಿ ಇಷ್ಟು ತಿಳೀಲಿಲ್ಲವೆ? ಸ್ವಲ್ಪ ದಿನ ವೇಷ ಮಾಡಿದರೆ ಆಯಿತು. ಆಮೇಲೆ ಕಣ್ಣು ಯಾಕೋ ಮಂಕಾಯಿತು ಅನ್ನು. ಆಮೇಲೆ ಕಣ್ಣು ತೀರ ಮಂದವಾಯಿತು ಅನ್ನು. ಕೊನೆಗೆ ಬೇಕಾದರೆ ಕುರುಡಿ ಅಂತಲೇ ತಿಳಿಯಲಿ, ಮದುವೆ ಆಗೋವರೆಗೆ ಹೇಗೋ ವೇಷ ಮಾಡಬೇಕು. ಆಮೇಲೆ ಕೈಹಿಡಿದ ಹೆಂಡತೀನ ಬಿಡುತ್ತಾರೆಯೇ? ಸರಿಯಾಗಿ ಬಾಳಿಸಿದರೆ ಸಂತೋಷ ಅನ್ನೋದು. ಬೇಡ ಎಂದರೆ ಒಂದು ಕಡೆ ಕೂರಿಸಿ ಅನ್ನ ಹಾಕುತ್ತಾರೆ. ದೇವರ ಇಚ್ಛೆ ಅನ್ನೋದು ಆದರೆ ಏನೇ ತಾಯಿ, ಗಂಡನ ಗುರುತು ಹಿಡಿಯೋಕೆ ಮಾತ್ರ ಏನಾದರೂ ಒಂದು ನೆಪ್ಪು ಇಟ್ಟಿಕೋಬೇಕು ನಿಮ್ಮ ತಂದೇನ ನಾನು ಗುರುತು ಹಿಡಿಯೋಕೆ ಹಾಗೆ ಮಾಡಿಕೊಂಡಿದ್ದೆ. ಅವರ ಎಡತೋಳ ಹಿಂದಗಡೆಗೆ ಒಂದು ಕಡಲೆಕಾಳಿನಷ್ಟು ಗಾತ್ರದ ಉಣ್ಣೆಯಿದೆ ನೋಡು. ಚಿಕ್ಕಂದೇ ಅದನ್ನು ಮುಟ್ಟಿ ಗುರುತುಮಾಡಿಕೊಂಡೆ. ಹೊತ್ತಿಲ್ಲದ ಹೊತ್ತಿನಲ್ಲಿ ಆಗದವರು ಕೆಡಿಸೋಕೆ ಬಂದರೆ ನಮ್ಮ ಮಾನ ಕಾಯೋರ್‍ಯಾರಮ್ಮ, ನಮ್ಮ ದೇವರು ನಮಗೆ ಒಳ್ಳೇ ಬುದ್ಧಿ ಕೊಡಬೇಕು. ನಮ್ಮ ಬುದ್ಧಿ ನಮ್ಮ ಕೈಲಿರಬೇಕು...... ಕಣ್ಣಿಲ್ಲದ ಹೆಂಗಸು ಎಲ್ಲರಂತೆ ಹೆಮ್ಮೆಯಿಂದ ನಡೆಯುವುದು ಕೂಡದು. ತಲೆ ತಗ್ಗಿಸಿಕೊಂಡು ನಡೆಯಬೇಕು. ಹೇಳಿದ ಮಾತು ಕೇಳಬೇಕು. ಹೆಂಗಸಿಗೆ ಎಂದಿದ್ದರೂ ಗಂಡ ದೇವರು. ಕುರುಡಿ ಬೇರೆ ಆಗಿ ಬಿಟ್ಟರೆ ಅವಳು ಅವನನ್ನು ಪರದೈವ ಎಂತಲೇ ಕಾಣಬೇಕು. ತಾನು ಮಾನವಾಗಿರುವುದಕ್ಕೆ ತನ್ನ ಗಂಡನ್ನ ತಿಳಿಯುವ ಗುರುತು ಏನಾದರೂ ಒಂದನ್ನು ಇಟ್ಟುಕೊಳ್ಳಬೇಕು ಇತ್ಯಾದಿ, ಇತ್ಯಾದಿ".[2]

ಈ ರೀತಿಯ ಲಕ್ಷ್ಮಮ್ಮನ ಮಾರ್ಗದರ್ಶನದ ಮಾತುಗಳು ಎಂತಹವರ ಮನಸ್ಸನ್ನಾದರೂ ಕಲಕುತ್ತವೆ. ಕೊನೆಗೆ ಮಗಳೂ ಬಾವಿಯಲ್ಲಿ ಬಿದ್ದು ತೀರಿಕೊಂಡಾಗ ಆ ತಾಯಿಹೃದಯ ಅನುಭವಿಸುವ ಯಾತನೆ ಅತ್ಯಂತ ಅಸಹನೀಯವಾದದ್ದು. ಇಂತಹ ಸಂದರ್ಭದಲ್ಲಿ ಗಂಡನಾದವನು ಗೃಹ ತ್ಯಜಿಸುತ್ತಾನೆ. ಹುಟ್ಟಿದ ಮಗು ಮತ್ತೆ ತೀರಿಕೊಳ್ಳುತ್ತದೆ. ಒಂದಾದಮೇಲೊಂದರಂತೆ ಬಂದೆರಗಿದ ನೋವನ್ನು ತಾಳಲಾರದ ಬುದ್ಧಿಭ್ರಮಣೆಗೊಳಗಾಗುತ್ತಾಳೆ. ಹುಟ್ಟಿನಿಂದಲೂ ಕಷ್ಟದ ಕುಲುಮೆಯಲ್ಲಿ ಬೆಂದ ಜೀವ ತೊರೆದು ಹೋದ ಗಂಡನಿಗಾಗಿ ಪಡುವ ಪರಿತಾಪ, ಬಾಳಿನಲ್ಲಿ ತಾನು ಕಂಡುಂಡ

---

2. ಮಾ.ವೆಂ.ಅಯ್ಯಂಗಾರ್ : ಸಣ್ಣಕತೆಗಳು, ಸಂಪುಟ ೨ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು ೧೯೮೯) ಪು.ಸಂ. ೨, ೧೦

ಅನುಭವಗಳನ್ನೇ ಬುದ್ಧಿಭ್ರಮಣೆಯಲ್ಲಿ ಮತ್ತೆ ಮತ್ತೆ ಉಚ್ಚರಿಸುವ ದೃಶ್ಯ, ಕರುಳನ್ನು ಕತ್ತರಿಸುತ್ತದೆ. ತಾಯ್ತನದ ಮಮತೆಯನ್ನು ಎಳೆಎಳೆಯಾಗಿ ಬಿಚ್ಚಿಡುವಲ್ಲಿ ಶ್ರೀನಿವಾಸರು ತೋರುವ ಅಪಾರ ಆದರ, ಎಚ್ಚರ, ಸಹಾನುಭೂತಿಗಳು ಲಕ್ಷ್ಮಮ್ಮನ ಪಾತ್ರದಲ್ಲಿ ಮೈವೆತ್ತಿವೆ.

'ಮೇಲೂರಿನ ಲಕ್ಷ್ಮಮ್ಮನ' ಕಥೆಯನ್ನು ಕುರಿತು ಎಂ.ಜಿ. ಕೃಷ್ಣಮೂರ್ತಿ ರವರು ವಿವರಿಸುವುದು ಹೀಗೆ;

> "ಮೇಲೂರಿನ ಲಕ್ಷ್ಮಮ್ಮನಲ್ಲಿ ನೋವನ್ನೇ ಒಪ್ಪಿಕೊಳ್ಳುವ ಶಕ್ತಿ ಕೊಡುವುದು, ಹಿಂದೂ ಸಂಸಾರ ಮತ್ತು ಆ ಕಲ್ಪನೆಯ ಅಂಗವಾದ ನಿಯಮಿತ ಹೊಣೆಗಾರಿಕೆಯ (Limited responsibility) ಕಲ್ಪನೆ. ಕತೆ ಹೇಳುವ ಲಕ್ಷ್ಮಮ್ಮನನ್ನು ತನ್ನ ಮನೆಗೆ ಕರೆದುಕೊಂಡು ಹೋದರೂ ಆಕೆಯನ್ನು ನೋಡಿಕೊಳ್ಳುವ ಹೊಣೆ ಆಕೆಯ ಅಣ್ಣನದು. ಆದ್ದರಿಂದಲೇ ಅಣ್ಣ ಹಳ್ಳಿಯಿಂದ ಬಂದು ತಂಗಿಯನ್ನು ಕರೆದುಕೊಂಡು ಹೋದ ಕೂಡಲೇ ಕತೆ ಹೇಳುವವನ ಹೊಣೆಕಾರಿಕೆ ಮುಗಿಯುತ್ತದೆ. ಅದರಿಂದಲೋ ಏನೋ ಕತೆ ಹೇಳುವವನಿಗೆ ನೋವಿನ ಕಾರಣ ಮತ್ತು ಹೊಣೆಗಾರಿಕೆ ಹುಡುಕದೆ ಜೀವನದಲ್ಲಿ ಇರುವ ನೋವನ್ನು ಒಪ್ಪಿಕೊಳ್ಳುವುದು ಸಾಧ್ಯವಾಗುತ್ತದೆ. ಹೊಣೆಗಾರಿಕೆಯ ಹಂತಗಳ (Gradations of responsibility) ಅರಿವು ಇರುವುದರಿಂದಲೇ ಕತೆ ಹೇಳುವವ ಲಕ್ಷ್ಮಮ್ಮನ ನೋವಿನೊಂದಿಗೆ ತಾದಾತ್ಮ್ಯ ಹೊಂದುವುದಿಲ್ಲ. ಕತೆ ಹೇಳುವವನ ಹೆಂಡತಿ, ಹಣೆಬರಹ ನಮ್ಮ ನಮ್ಮ ನೋವುಗಳಿಗೆ ಕಾರಣವೆಂದರೂ ಆ ಸಿದ್ಧಾಂತವನ್ನೊಪ್ಪಿಕೊಳ್ಳದೆ ಕತೆ ಹೇಳುವವ ನೋವಿನೊಂದಿಗೆ ರಾಜಿ ಮಾಡಿಕೊಳ್ಳುತ್ತಾನೆ. ಆದರೆ ಕತೆ ಹೇಳುವವನ ಅಪನಂಬಿಕೆ (Scepticism) ಕೂಡ ಅವನ ಹೆಂಡತಿಯ ("ಇವೆಲ್ಲಾ ವೇದಾಂತವೆಂದು ನಮ್ಮ ಮನೆಯ ವರ ಅಭಿಪ್ರಾಯ") ಅಭಿಪ್ರಾಯದಿಂದಾಗಿ, ಆಕೆ ತನ್ನ ಗಂಡನ ಅಭಿಪ್ರಾಯಕ್ಕೆ ಗಮನ ಕೊಡದೆ ಹೋಗುವುದರಿಂದಾಗಿ, ಸಿದ್ಧಾಂತವಾಗದೆ ಜೀವನದಲ್ಲಿ ನೋವಿರುವುದನ್ನು ಒಪ್ಪಿಕೊಂಡವ ತನ್ನ ಒಪ್ಪಿಗೆಗೆ ಕೊಡುವ ಅಸಂಪೂರ್ಣ ಬೌದ್ಧಿಕ ಕಾರಣವಾಗಿ ಉಳಿಯುತ್ತದೆ. ಕಾರಣಕ್ಕಿಂತ ಹೆಚ್ಚಾಗಿ ನೋವಿನ ಅರಿವು, ಅದನ್ನು ಒಪ್ಪಿಕೊಳ್ಳುವುದು ಮುಖ್ಯವಾಗುತ್ತದೆ".[3] ಎನ್ನುವುದರೊಂದಿಗೆ ಕತೆಗೆ ಒಂದು ಮನೋಭೂಮಿಕೆಯನ್ನು ಒದಗಿಸಿಕೊಡುತ್ತಾರೆ.

- **ಚಟ್ಟೇಕಾರ ತಾಯಿ**

'ಚಟ್ಟೇಕಾರ ತಾಯಿ' ಎಂಬುದು 'ಆಂಗ್ಲೋ ಇಂಡಿಯನ್ಸ್' ಪಂಗಡದವರನ್ನು ಕುರಿತಾದ ಕಥೆ ಸ್ವತಂತ್ರ ಪೂರ್ವದಲ್ಲಿ ಆಂಗ್ಲರು ಭಾರತೀಯ ಹೆಣ್ಣು ಮಕ್ಕಳನ್ನು ನೋಡುತ್ತಿದ್ದ ರೀತಿ ಈ ಕಥೆಯಲ್ಲಿ ಸ್ವಲ್ಪ ಮಟ್ಟಿಗೆ ವಿವರಣೆಗೊಳಗಾಗಿದೆ. ಆಂಗ್ಲರು ಅಥವಾ ಬಿಳಿಯರು ಭಾರತೀಯ ಸ್ತ್ರೀಯನ್ನು ತಮ್ಮ ಆಸೆಯನ್ನು ತೀರಿಸಿಕೊಳ್ಳುವುದಕ್ಕೋಸ್ಕರ

3. ಎಂ.ಜಿ. ಕೃಷ್ಣಮೂರ್ತಿ : ಮಾಸ್ತಿಯವರ ಸಣ್ಣ ಕಥೆಗಳು. ಶತಮಾನದ ಸಾಹಿತ್ಯ ವಿಮರ್ಶೆ, ಸಂ. ಹೆಚ್.ಎಸ್. ರಾಘವೇಂದ್ರರಾವ್, ಕನ್ನಡ ಸಾಹಿತ್ಯ ಪರಿಷತ್ತು, ೧೯೯೭, ಪು.ಸಂ. ೪೨೩

ಉಪಯೋಗಿಸಿಕೊಳ್ಳುತ್ತಿದ್ದ ವಿಚಾರ ಈ ಕಥೆಯಿಂದ ತಿಳಿಯಲ್ಪಡುತ್ತದೆ. ಆ ರೀತಿಯಾಗಿ ಬಲಿಯಾದ ಹೆಣ್ಣಿಗೆ ಹುಟ್ಟಿದ ಮಕ್ಕಳು ತಿರಸ್ಕಾರಕ್ಕೆ ಬಾಜನರಗುತ್ತಿದ್ದರು. ಆದರೆ 'ಚಟ್ಟೇಕಾರ ತಾಯಿ' ಕತೆಯುಲ್ಲಿ ಬರುವಂತಹ ತಾಯಿ ಸಂಸಾರವನ್ನು ಸಮರ್ಥವಾಗಿ ನಿಭಾಯಿಸುವಂತಹವಳು. ಅವಳ ನೇರ ನುಡಿ ಮತ್ತು ನಡೆ ಎಂತಹವರನ್ನು ದಿಗ್ಭ್ರಮೆಗೊಳಿಸುತ್ತದೆ. ಗಂಡನಾದವನು ಕುಡಿತದ ಚಟಕ್ಕೆ ಒಳಗಾದಾಗ ಸಂಸಾರಕ್ಕೆ ನೌಕೆ ನಡೆಯದಾಯಿತು. ಆಗ ಅವಳು ಧೃತಿಗೆಡದೆ, ತನ್ನ ಮಕ್ಕಳು ಬೀದಿ ಪಾಲಾಗಬಾರದೆಂಬ ಉದ್ದೇಶದಿಂದ ಸೂಪರಿಂಟೆಂಡೆಂಟರ ಬಳಿ ಹೋಗಿ ಸದ್ಯದ ಪರಿಸ್ಥಿತಿಯನ್ನು ವಿವರಿಸಿ ಗಂಡನ ಸಂಬಳದಲ್ಲಿ ಅರ್ಧ ಅವಳ ಕೈ ಸೇರುವಂತೆ ಮಾಡಿಕೊಳ್ಳುವ ರೀತಿ ಮೆಚ್ಚುವಂತಹುದು.

ಕುಡುಕ ಗಂಡ ತೀರಿಕೊಂಡಾಗಲು ಅವಳು ಧೃತಿಗೆಡಲಿಲ್ಲ. ಮಕ್ಕಳನ್ನು ಕ್ರಮಬದ್ಧವಾಗಿ ಬೆಳೆಸುವಲ್ಲಿ ಸೂಕ್ತ ನಿರ್ಧಾರಗಳನ್ನೇ ತೆಗೆದುಕೊಳ್ಳುತ್ತಾಳೆ. ಹಿರಿಯ ಮಗನನ್ನು ತಂದೆಯ ವರ್ಕ್‌ಷಾಪಿನಲ್ಲಿಯೇ ಕೆಲಸ ಕಲಿಯಲು ಸೇರಿಸುತ್ತಾಳೆ. ಎರಡನೆಯ ಮಗನನ್ನು ಅನಾಥ ಬಾಲಕರ ಸಂಸ್ಥೆಗೆ ಸೇರಿಸಲು ಹೋದಾಗ ಅವಳಾಡುವ ಪ್ರತಿಯೊಂದು ಮಾತು ಮಾತೃಪ್ರೇಮದ ದಿಟ್ಟತನಕ್ಕೆ ಸಾಕ್ಷಿಯಾಗುತ್ತವೆ. ಆಕೆಯಾಡುವ ದಿಟ್ಟತನದ ಮಾತಿನಿಂದಲೇ ಎರಡನೇ ಮಗನಿಗೆ ಅನಾಥ ಬಾಲಕರ ಸಂಸ್ಥೆಯಲ್ಲಿ ಓದಿಗೆ ಏರ್ಪಾಡಾಗುತ್ತದೆ. ಪರಿಚಿತ ವ್ಯಕ್ತಿಯೊಬ್ಬ ಆ ತಾಯಿಯನ್ನು ಕುರಿತು ನೀವು ನೋಡಲು ಚೆನ್ನಾಗಿದೀರಿ, ನಿಮಗೆ ಜೀವನ ಕಷ್ಟ ಆಗಬಾರದು ಎಂದು ಕಟಕಿಯಾಡಿದಾಗ ಆಕೆ ಒಡ್ಡುವ ಪ್ರತಿರೋಧ ಎಂತಹ ಹೆಣ್ಣಿಗೂ ಸ್ಫೂರ್ತಿದಾಯಕವಾಗಬಲ್ಲದು. ಇನ್ನು ಹೆತ್ತ ಮಗನೇ ತಾಯಿಯನ್ನು ಮುದುಕಿ ಎಂದು ಜರಿದಾಗ ಆಕೆ ಅವನಿಗೆ ತಾಯಿಯ ಪ್ರೇಮತ್ವ ಎಂತಹುದು ಎಂಬುದನ್ನು ಪ್ರತ್ಯಕ್ಷವಾಗಿ ತೋರಿಸಿದಾಗ, ತಪ್ಪನ್ನರಿತ ಮಗ ತಾಯಿ ಕಾಲ ಮೇಲೆ ಬಿದ್ದು ಕ್ಷಮೆಯಾಚಿಸುತ್ತಾನೆ. ಚಟ್ಟೇಕಾರ ಜನಾಂಗದ ನಿಸ್ಸಂಕೋಚ ಪ್ರವೃತ್ತಿ, ನೇರನುಡಿ ಹಾಗೂ ತಾಯಿ ಸ್ಥಾನದಲ್ಲಿ ನಿಂತು ಮಕ್ಕಳನ್ನು ಬೆಳೆಸುವ ಜವಾಬ್ದಾರಿಯನ್ನು ಹೇಗೆ ನಿಭಾಯಿಸಬೇಕೆಂಬುದನ್ನು 'ಚಟ್ಟೇಕಾರ ತಾಯಿ' ಎಂಬ ಕಥೆ ತಿಳಿಸಿಕೊಡುವಲ್ಲಿ ಯಶಸ್ವಿಯಾಗಿದೆ.

➢ **ಒಬ್ಬ ತಾಯಿ, ಮಗ**

ಮಾಸ್ತಿಯವರ ಸಫಲ ಕತೆಗಳಲ್ಲಿ ಇದೂ ಒಂದು. ನಿರೂಪಣೆಯ ದೃಷ್ಟಿಯಿಂದ ಈ ಕಥೆ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಇಪ್ಪತ್ತೈದು ವರ್ಷಗಳ ಹಿಂದೆ ನಡೆದ ಒಂದು ಘಟನೆಯನ್ನು ಮೆಲಕು ಹಾಕುವ ರೀತಿಯಲ್ಲಿ ಕಥೆ ಮುಂದುವರೆಯುತ್ತದೆ. ಈ ಕತೆಯು ಎರಡು ಪಾತ್ರಗಳ ಪರಸ್ಪರ ಮಾತುಗಾರಿಕೆಯ ಮುಖೇನ ಸಾಗುತ್ತದೆ.

ನಿರೂಪಕರ ಸ್ಥಾನದಲ್ಲಿ ಒಬ್ಬರದು ಭಾರತವಾದರೆ ಮತ್ತೊಬ್ಬರದು ನ್ಯೂಜಿಲ್ಯಾಂಡ್. ಕಥೆಯ ಪ್ರಾರಂಭದಲ್ಲಿ ಧರ್ಮದ ವಿಷಯಕ್ಕೆ ಸಂಬಂಧಿಸಿದಂತೆ ಅವರಿಬ್ಬರ ನಡುವೆ ವಾದ ಪ್ರತಿವಾದಗಳು ನಡೆಯುತ್ತವೆ. ನ್ಯೂಜಿಲ್ಯಾಂಡ್‌ನಿಂದ ಬಂದಂತ ಪಾದ್ರಿ ಪ್ರೋಟೆಸ್ಟೆಂಟ್ ಶಾಖೆಯ ಧರ್ಮವೇ ಜಗತ್ತಿನಲ್ಲಿ ಶ್ರೇಷ್ಠವಾದುದು ಎನ್ನುವುದನ್ನು ಸಾರಲು ಯತ್ನಿಸುತ್ತಾನೆ. ಆದರೆ ಭಾರತೀಯ ನಿರೂಪಕ ಅದನ್ನು ಸಮರ್ಥವಾಗಿ ಪ್ರಶ್ನಿಸುತ್ತಾ ಪತ್ರಿಯೊಂದು ಧರ್ಮದಲ್ಲೂ ಒಳ್ಳೆಯ ಗುಣಗಳೂ ಇರುತ್ತವೆ, ಹಾಗೆ ಕೆಟ್ಟ ಆಚರಣೆಗಳು ಇರುತ್ತವೆ, ಆದರೆ ಧರ್ಮವನ್ನು ಸ್ವೀಕರಿಸುವವರ ಮೇಲೆ ಒಳಿತು ಕೆಡಕು ಅವಲಂಭಿಸಿರುತ್ತದೆ. ಎನ್ನುವ ವಿಷಯವನ್ನು ಮನದಟ್ಟು ಮಾಡಿಸುತ್ತಾನೆ. ಈ ಕಥೆಯಲ್ಲಿ ನಡೆಯುವ ಧರ್ಮಕ್ಕೆ ಸಂಬಂಧಿಸಿದ ವಿಚಾರಗಳನ್ನು ಗಮನಿಸಿದಾಗ ಮಾಸ್ತಿಯವರಿಗೆ ಹಿಂದೂಧರ್ಮದ ಬಗ್ಗೆ ಅಪಾರವಾದ ಗೌರವವಿರುವುದು ಗೊತ್ತಾಗುತ್ತದೆ. ಆದರೆ ಇತರೆ ಧರ್ಮಗಳಲ್ಲಡಗಿರುವ ಒಳ್ಳೆಯ ಗುಣಗಳ ಬಗ್ಗೆ ಅವರಿಗೆ ಮೆಚ್ಚುಗೆಯೂ ಇದೆ. ಕಥೆ ಧರ್ಮದ ವಿಷಯವನ್ನು ಕುರಿತಂತೆ ಮುಂದುವರಿಯುತ್ತಾದರೂ ಮಧ್ಯದಲ್ಲಿ ಹೊಸ ತಿರುವನ್ನು ಪಡೆದುಕೊಳ್ಳತ್ತದೆ. ರೈಲಿನಲ್ಲಿ ನಿರೂಪಕರಿಬ್ಬರೂ ಪ್ರಯಾಣಿಸುತ್ತಿದ್ದ ಸಂದರ್ಭದಲ್ಲಿ ಅನಿರೀಕ್ಷಿತವಾಗಿ ಒಂದು ಘಟನೆ ಇವರಿಗೆ ಕಾಣಿಸುತ್ತದೆ. ಒಬ್ಬ ತಾಯಿಯನ್ನು ಮಗನೇ ಹೊಡೆಯುವ ರೀತಿಯನ್ನು ಕಂಡು ಆತಂಕಕ್ಕೀಡಾಗುತ್ತಾರೆ. ಅದರ ಪೂರ್ವಾಪರವನ್ನು ತಿಳಿಯಲೇಬೇಕೆಂಬ ಹಂಬಲ ಅವರಿಬ್ಬರಲ್ಲಿ ಮೂಡಿದಾಗ ಆ ತಾಯಿ ಮತ್ತು ಮಗನ ನಿಜವಾದ ಕಥೆ ತಿಳಿಯುತ್ತದೆ.

ಮಗನಾದವನು ಅಡ್ಡದಾರಿ ಹಿಡಿದಿದ್ದಾನೆ ಎನ್ನುವ ಕಾರಣಕ್ಕಾಗಿ ದುಗ್ಗವ್ವ ಎನ್ನುವ ತಾಯಿ ಅವನನ್ನು ಸರಿದಾರಿಗೆ ತರಲು ಪ್ರಯತ್ನಿಸುತ್ತಾಳೆ. ಇಂತಹ ಸಂದರ್ಭದಲ್ಲಿ ಮಗನಾದವನು ತಾಯಿಯೆಂಬುದನ್ನು ಲಕ್ಷಿಸದೆ ಅವಳನ್ನು ದಂಡಿಸುತ್ತಾನೆ. ಆದರೂ ತಾಯಿಯಾದವಳು ಆ ನೋವನ್ನು ತಡೆದುಕೊಂಡು ಏನಾದರೂ ಸರಿಯೇ ತನ್ನ ಮಗನನ್ನು ಒಳ್ಳೆಯವನಾಗಿ ಮಾಡಬೇಕೆಂಬ ದೃಢಸಂಕಲ್ಪದಿಂದಾಗಿ ಎಲ್ಲವನ್ನು ಸಹಿಸುತ್ತಾಳೆ. ದುಗ್ಗವ್ವನ ಸಹನೆ, ದೃಡಸಂಕಲ್ಪ, ಮಗನ ಭವಿಷ್ಯಕ್ಕಾಗಿ ಅವಳು ಪಡುವ ಹಂಬಲ, ಇವೆಲ್ಲವುಗಳ ಫಲವಾಗಿ ಮಗ ಕೊನೆಗೆ ದುಗ್ಗವ್ವನ ಮಾತಿನಂತೆ ನಡೆದುಕೊಳ್ಳುವ ಮೂಲಕ ಎಲ್ಲವೂ ಸುಖಮಯವಾಗುತ್ತದೆ. ತಾಯಿ ತನ್ನ ಮಗನನ್ನು ಸರಿದಾರಿಗೆ ತಂದ ಖುಷಿಯಲ್ಲಿ ಅವನ ಹೊಡೆತಗಳನ್ನೆಲ್ಲಾ ಮರೆತಿದ್ದಾಳೆ. ಅವಳಿಗೆ ಮಗ ಸರಿಹೋದದ್ದೇ ಜೀವನದಲ್ಲಿ ಸಂತೋಷ ತರುವ ವಿಷಯ.

ಅಧ್ಯಾಯ : ಏಳು

# ಪ್ರಯಣ, ಪ್ರೀತಿ, ಪ್ರೇಮದ ನೆಲೆಯ ಚಿಂತನೆ

- ರಂಗಪ್ಪನ ಕತೆಗಳು
- ವೆಂಕಟಶಾಮಿಯ ಪ್ರಣಯ
- ಗೌತಮಿ ಹೇಳಿದ ಕತೆ
- ವಿಚಿತ್ರ ಪ್ರೇಮ

## ಪ್ರಣಯ, ಪ್ರೀತಿ, ಪ್ರೇಮ, ನೆಲೆಯ ಚಿಂತನೆ

ಕನ್ನಡದಲ್ಲಿ ಸಣ್ಣಕತೆ ಅತ್ಯಂತ ಹುಲುಸಾಗಿ ಬೆಳೆದಿರುವ ಸಾಹಿತ್ಯ ಪ್ರಕಾರವಾಗಿದೆ. ಕಾಲಕಾಲಕ್ಕೆ ಬದಲಾಗುತ್ತ, ಬೆಳೆಯುತ್ತ, ಹೊಸ ಹೊಸ ಆಹ್ವಾನಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತ ತನ್ನ ಜೀವಂತಿಕೆಯನ್ನು ಕಾಪಾಡಿಕೊಂಡು ಬಂದಿದೆ. ನವೋದಯದ ಸಂದರ್ಭದಲ್ಲಂತೂ ವಿಶೇಷವಾಗಿ ಕತೆಗಳನ್ನು ರಚಿಸಿರುವ ಕಥೆಗಾರರ ಬಗ್ಗೆ ಈಗಾಗಲೇ ತಿಳಿದಿದ್ದೇವೆ. ನವೋದಯದವರು ಇಂಗ್ಲೀಷ್‌ನ ರೊಮ್ಯಾಂಟಿಕ್ ಸಾಹಿತ್ಯದ ಪ್ರಭಾವಕ್ಕೊಳಗಾಗಿ ಪ್ರೀತಿ, ಪ್ರೇಮ, ಪ್ರಣಯ, ಪ್ರಕೃತಿಗೆ ಸಂಬಂಧಿಸಿದಂತೆ ಕಥೆ, ಕವನ, ಕಾದಂಬರಿ ಇತ್ಯಾದಿಗಳನ್ನು ರಚಿಸಿದ್ದು ವಿಶೇಷ. ಕುವೆಂಪುರವರು ಆ ನಿಟ್ಟಿನಲ್ಲಿ ರಸಋಷಿಯೇ ಆಗಿಬಿಟ್ಟರು. ನವೋದಯ ಕಾಲಘಟ್ಟದ ಬರಹಗಾರರಲ್ಲಿ ವಿಶೇಷವಾಗಿ ಪ್ರೀತಿ, ಪ್ರೇಮದ ವಿಚಾರಗಳು ಮೈವೆತ್ತಿರುವುದನ್ನು ಗಮನಿಸಬಹುದು. ಮಾಸ್ತಿಯವರಂತು ಕಥೆಗಳ ಮೂಲಕ ಕನ್ನಡದ ಆಸ್ತಿಯಾದರು. ಅವರ ಪ್ರಾರಂಭದ ಕಥೆಗಳಲ್ಲಿ ಪ್ರೀತಿ, ಪ್ರೇಮದ ವಿಚಾರ ಹುಲುಸಾಗಿ ಹಬ್ಬಿದೆ. ಅವರ ಕಥೆಗಳ ವೈಶಿಷ್ಟ್ಯವೆಂದರೆ, ಒಂದು ಕಾಲದ ಜೀವನ ಕ್ರಮವನ್ನು ಸಹಜವಾದ ವಿವರಗಳ ಮೂಲಕ ಮತ್ತು ಭಾಷೆಯ ಎಚ್ಚರದ ಬಳಕೆಯ ಮೂಲಕ ಹಿಡಿದಿಟ್ಟಿರುವುದು. ಹೆಣ್ಣಿನ ಸೌಂದರ್ಯವನ್ನು ವರ್ಣಿಸುವಲ್ಲಿ ಮಾಸ್ತಿಯವರಿಗೆ ವಿಶೇಷ ಒಲವುಂಟು. ಅವಳು ವೇಶ್ಯೆಯಾಗಲಿ ಸಾಧ್ವಿಯಾಗಲಿ, ಕುರುಡಿಯಾಗಲಿ ಸುರೂಪಿಯಾಗಲಿ, ರಾಣಿಯಾಗಿರಲಿ ನಿರ್ಗತಿಕಳಾಗಿರಲಿ ಎಲ್ಲರಲ್ಲೂ ಸೌಂದರ್ಯವನ್ನು ಹುಡುಕಲು ಪ್ರಯತ್ನಿಸುತ್ತಾರೆ.

ತಂತ್ರದ ದೃಷ್ಟಿಯಿಂದ ಆ ಕಾಲದ ಕತೆಗಾರಿಕೆಯ ರೂಢಿಗಳನ್ನು ಬಳಸಿಕೊಂಡು ಒಬ್ಬೊಬ್ಬ ವ್ಯಕ್ತಿಯಲ್ಲಿ ಒಂದೊಂದು ಚೇತನವನ್ನು ಕಂಡಂತ ಮಾಸ್ತಿಯವರ ದೃಷ್ಟಿ ಅನನ್ಯವಾದುದು. ಪ್ರತಿ ಮಾನವನಲ್ಲಿ ಪ್ರೀತಿಯನ್ನು ಕಾಣುವ, ಅನುಭವದಲ್ಲಿ ಆಳ, ವಿಸ್ತಾರ ಎಲ್ಲಕ್ಕೂ ತೆರೆದ ಮನಸ್ಸು, ಸರ್ವವನ್ನೂ ಭಗವದ್ವಿಲಾಸವೆಂದೂ ಒಪ್ಪುವ ರೀತಿ, ಅದಕ್ಕೆ ಅಧೀನವಾಗಿ ಬಾಳನ್ನು ಚೊಕ್ಕಗೊಳಿಸಿ ಅದರ ಸ್ವೀಕಾರಕ್ಕೆ ಯೋಗ್ಯ ಮಾಡಿಕೊಳ್ಳಬೇಕೆಂಬ ವೃತ್ತಿ ಮಾಸ್ತಿಯವರದು. ಅವರದು ಬರಿಯ ಸಾಹಿತ್ಯವಲ್ಲ; ಒಂದು ಸಮಗ್ರ ಜೀವನ. ಎಲ್ಲರಿಗೂ ಒಂದೇ ಮುಖ, ಆ ಮುಖದಲ್ಲಿ ಎರಡೇ ಕಣ್ಣು, ಎರಡೇ ಕಿವಿ, ಒಂದೇ ಮೂಗು, ಒಂದೇ ಬಾಯಿ, ಎರಡೇ ಕೆನ್ನೆಗಳು. ಆದರೆ ಮುಖದಿಂದ ಮುಖಕ್ಕೆ ಎಷ್ಟು ವ್ಯತ್ಯಾಸ. ಎರಡು ಮುಖಗಳಿಗಿರುವ ವ್ಯತ್ಯಾಸವನ್ನು ಬಾಯಿಯಲ್ಲಿ ವಿವರಿಸುವುದಕ್ಕಾಗದಿದ್ದರೂ ಅವುಗಳಿಗಿರುವ ಯಾವುದೋ ಸೂಕ್ಷ್ಮ ವ್ಯತ್ಯಾಸವನ್ನು ಕಣ್ಣು ಗುರುತಿಸುತ್ತದೆ. ಮನಸ್ಸು ಅರಿಯುತ್ತದೆ. ಅದರಿಂದಲೇ 'ಇದು ಇವರ ಮುಖ, ಅದು ಅವರ ಮುಖ' ಎಂದು ಗುರುತಿಸಲು ಸಾಧ್ಯ, ಎಲ್ಲದರಲ್ಲಿಯೂ ನಮ್ಮ ಸುತ್ತಮುತ್ತಲಿನ

ಜಗತ್ತಿನಲ್ಲಿ ಇದೇ ಮೇರೆಯಿಲ್ಲದ ವೈವಿಧ್ಯ. ಕಣ್ಣುಗಳಲ್ಲಿ ಎಷ್ಟು ವಿಧ! ಹಣ್ಣುಗಳಲ್ಲಿ ಎಷ್ಟು ಬಗೆ! ಹೂವುಗಳಲ್ಲಿ ಎಷ್ಟು ವೈವಿಧ್ಯ! ಹಾಗೆಯೇ ಮನುಷ್ಯರ ಬದುಕಿನಲ್ಲಿಯೂ ಸಹ ವೈವಿಧ್ಯವಿರುವುದು ಸೃಷ್ಟಿ ಶಕ್ತಿಯ ಸಲ್ಲಕ್ಷಣ ಸಾಹಿತಿ ತನ್ನ ಸೂಕ್ಷ್ಮ ಕಣ್ಣಿನಿಂದ ಈ ಅಪಾರ, ಅನಂತ ಜೀವನವನ್ನು ಕಂಡು, ನೋಡಿ, ಗುರುತಿಸಿ, ಅನುಭವಿಸಿ, ಮಿಡಿದು ಸೃಷ್ಟಿಸುತ್ತಾನೆ. ಮಾಸ್ತಿಯವರು ಪ್ರತಿ ಭಾವನೆಯನ್ನೂ ಮುಗ್ಧತೆಯಿಂದ ಹಿಡಿದು ನಿರ್ಲಿಪ್ತತೆಯವರೆಗೆ ಸ್ವಾರ್ಥದ ಬಲೆಯ ಸೆರೆತನದಿಂದ ನಿಸ್ವಾರ್ಥ ಸೇವೆಯ ಪರಾಕಾಷ್ಠೆಯವರಿಗೆ ಮನಸ್ಸು ಮುಟ್ಟಬಹುದಾದ ಎಲ್ಲ ಸ್ಥಿತಿಗತಿಗಳನ್ನೂ – ಸ್ಪಷ್ಟವಾಗಿ, ಪರಿಣಾಮಕಾರಿಯಾಗಿ ಚಿತ್ರಿಸಬಲ್ಲರು ಎನ್ನುವುದಕ್ಕೆ ಅವರ ಯಶಸ್ವಿಯಾದ ಪ್ರೀತಿ, ಪ್ರೇಮ, ಪ್ರಣಯದ ಚಿಂತನೆಯನ್ನೊಳಗೊಂಡಿರುವ ಕಥೆಗಳು ಸಾಕ್ಷಿಯಾಗಿವೆ.

- **ರಂಗಪ್ಪನ ಕಥೆಗಳು.**

'ರಂಗನ ಮದುವೆ', ರಂಗಪ್ಪನ ದೀಪಾವಳಿ, ರಂಗಪ್ಪನ ಕೋರ್ಟ್‌ಶಿಪ್ ಈ ಕತೆಗಳಲ್ಲಿ ಬರುವ ನಾಯಕ ಪೌರಾಣಿಕ ಅಥವಾ ಐತಿಹಾಸಿಕ ವೀರನಲ್ಲ. ನಾವು ನೋಡಿರಬಹುದಾದ, ಕೇಳಿರಬಹುದಾದ, ನಮ್ಮಂಥವರಲ್ಲಿ ಒಬ್ಬನಾದ ರಂಗ. ಬರಿಯ ರಂಗನಲ್ಲ – ನಮ್ಮೂರಿನ ನಮ್ಮ ರಂಗ ಮತ್ತು ಅವನ ಮದುವೆಯ ವಿಷಯ. ಇಲ್ಲಿ ಆತ್ಮೀಯತೆ ಇದೆ. ಮತ್ತು ಅವನ ಮದುವೆಯ ವಿಷಯ ಏನು ಎಂಬ ಕುತೂಹಲವೂ ಇದೆ. ಆತ್ಮೀಯತೆ ಮಾಸ್ತಿಯವರ ಹಿರಿಯ ಗುಣ; ಕುತೂಹಲ ಸಣ್ಣ ಕಥೆಗೆ ಇರಬೇಕಾದದ್ದು.

ಮೊದಲ ಕತೆಗಳಾದ ರಂಗಪ್ಪನ ಕಥೆಗಳು ಹಾಸ್ಯ ಬಿತ್ತಿಯ ಮೇಲೆ ರಚಿಸಲ್ಪಟ್ಟ ಸುಂದರ ಚಿತ್ರಗಳು. ವಿದ್ಯಾಭ್ಯಾಸವೇ ಅಪರೂಪವಾಗಿದ್ದ ಕಾಲದಲ್ಲಿ ರಂಗ ಇಂಗ್ಲೀಷ್ ಕಲಿತು ಬೆಂಗಳೂರಿನಿಂದ ಬಂದಾಗ, ವಿಚಿತ್ರ ಪ್ರಾಣಿಯನ್ನು ನೋಡುವಂತೆ, ಬೇರೊಂದು ಲೋಕದಿಂದ ಬಂದ ಮನುಷ್ಯನನ್ನು ನೋಡುವಂತೆ ಊರ ಜನರೆಲ್ಲ ಮುತ್ತಿಕೊಂಡು ಅವನನ್ನು ನೋಡುವುದು ನಗೆಯನ್ನುಕ್ಕಿಸುವಂತೆಯೇ ಹಳ್ಳಿಗರ ಮುಗ್ಧತೆಯನ್ನು ಚೆನ್ನಾಗಿ ತೋರಿಸುತ್ತದೆ. ರಂಗ ವಿವಾಹ ಮಾಡಿಕೊಳ್ಳುವುದಿಲ್ಲವೆಂದು ಮದುವೆಯ ಬಗ್ಗೆ ದೊಡ್ಡ ಭಾಷಣವನ್ನೇ ಬಿಗಿದು 'ಒಂದು ಕೆನ್ನೆ ಹಾಲು, ಒಂದು ಕೆನ್ನೆ ನೀರು ಆಗಿ, ಬೆರಲು ಕುಡಿಯಲು ಸಹ ಬಾರದ ಹುಡುಗಿಯರನ್ನು ತಂದು ಇದುರಿಗೆ ನಿಲ್ಲಿಸಿದರೆ, ಮೆಚ್ಚುವುದು ಹೇಗೆ?' ಎಂದು ವಾದಿಸುವುದು ಅವನ ಪಟ್ಟಣ ಜ್ಞಾನವನ್ನೂ ವೈಚಾರಿಕತೆಯನ್ನೂ ವ್ಯಕ್ತಪಡಿಸಿದರೆ, ರತ್ನಳನ್ನು ನೋಡಿ ಮಾರುಹೋಗಿ ಅವಳನ್ನು ಮದುವೆಯಾಗಲು ಅವನು ಪಡುವ ಕಾತರ ಕಳವಳ ವಯಸ್ಕನೊಬ್ಬನ ಮನಸ್ಸಿನ ನೈಜ ಚಿತ್ರವನ್ನು ಸಶಕ್ತವಾಗಿ ಮೂಡಿಸುತ್ತದೆ. ಮೊದಲು ಆಶಾಭಂಗವಾಗುವಂತೆ ಮಾಡಿ ಆಸಕ್ತಿಯನ್ನು ಹೆಜ್ಜೆ ಹೆಜ್ಜೆಗೂ ಕೆರಳಿಸಿ ಕೊನೆಗೆ ಅವನಿಗೆ ಮದುವೆ ಮಾಡಿಸುವ ಚಾತುರ್ಯ ಮೆಚ್ಚುವಂಥದು.

ರಂಗಪ್ಪನ ಕತೆಗಳನ್ನು ಕುರಿತು ಎಂ.ಜಿ. ಕೃಷ್ಣಮೂರ್ತಿಯವರು ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸುತ್ತಾರೆ;

"ಎಲ್ಲಕ್ಕೂ ಮೊದಲಿಗೆ ನಮ್ಮ ಗಮನ ಸೆಳೆಯುವ ಸಂಗತಿಯೆಂದರೆ ನಮ್ಮಲ್ಲಿ "ರೊಮ್ಯಾಂಟಿಕ್" ಸಾಹಿತ್ಯ ಬೆಳೆಯುತ್ತಿದ್ದಾಗಲೂ ಮಾಸ್ತಿಯವರು ತಮ್ಮದೇ ಬೇರೆ ರೀತಿಯ ಸಾಹಿತ್ಯ ಬೆಳೆಸುತ್ತಿದ್ದುದು. 1920 ರಲ್ಲಿ ಪ್ರಕಟವಾದ ಅವರ ಕೆಲವು ಸಣ್ಣ ಕತೆಗಳು ಎಂಬ ಸಂಗ್ರಹದಲ್ಲಿರುವ "ರಂಗನ ಮದುವೆ", "ರಂಗಪ್ಪನ ದೀಪಾವಳಿ", "ರಂಗಪ್ಪನ ಕೋರ್ಟ್‌ಶಿಪ್", ಮತ್ತು "ರಂಗಸಾಮಿಯ ಅವಿವೇಕ" – ಈ ಕತೆಗಳಿಗೂ, ಹಲವು ವರ್ಷಗಳ ನಂತರ ಬೇರೆಯವರು ಬರೆದ, ಪ್ರೇಮವನ್ನೇ ಮುಖ್ಯ ವಸ್ತುವಾಗುಳ್ಳ ಕತೆ ಕವನಗಳಿಗೂ ಇರುವ ವ್ಯತ್ಯಾಸ ಮಾಸ್ತಿಯವರ ಸಂವೇದನಾಶೀಲನೆಯ ಮೇಲೆ ಬೆಳಕು ಚೆಲ್ಲುತ್ತದೆ. ರೊಮ್ಯಾಂಟಿಕ್ ಬರಹಗಾರಿಗೆ ಅನೇಕ ವೇಳೆ ಕಲೆಯೇ ಜೀವನವಾದಲ್ಲಿ ಈ ನಾಲ್ಕು ಕತೆಗಳು ಕಲೆಗೂ ಜೀವನಕ್ಕೂ ಇರಬೇಕಾದ ಸಂಬಂಧದ ಬಗ್ಗೆ ಕೆಲವು ಪ್ರಶ್ನೆಗಳನ್ನು ಓದುಗನ ಗಮನಕ್ಕೆ ತರುತ್ತವೆ. ತಾನೇ ಮೆಚ್ಚಿ ಮದುವೆ ಮಾಡಿಕೊಳ್ಳಬೇಕು ಎಂದು ಹೇಳುವ ರಂಗನ ಬೆಳವಣಿಗೆ "ರಂಗನ ಮದುವೆ", "ರಂಗಪ್ಪನ ದೀಪಾವಳಿ" ಮತ್ತು 'ರಂಗಪ್ಪನ ಕೋರ್ಟ್‌ಶಿಪ್'ಗಳ ವಿಷಯ ಮೊದಲು ಕತೆಯಲ್ಲಿಯೇ ಕತೆ "ನಡೆದ" ಕಾಲಕ್ಕೂ, ಕತೆ ಹೇಳುವ ಕಾಲಕ್ಕೂ ಹತ್ತು ವರ್ಷಗಳ ಅಂತರವಿದೆ ಎಂಬ ಮಾತು ಬರುತ್ತದೆ; "ಆಗ ನಮ್ಮ ಊರಿನಲ್ಲಿ ಇಂಗ್ಲೀಷ್ ಓದಿದವರು ಬಹುಜನ ಇರಲಿಲ್ಲ" ಎಂದು ಕತೆ ಹೇಳುವವ ಹೇಳುವುದು ಹೊಸಹಳ್ಳಿಯ ಸ್ಥಿತಿಯನ್ನು ವರ್ಣಿಸುವುದರ ಜೊತೆಗೇ ರಂಗನ ಅಭಿಪ್ರಾಯಗಳಿಗೂ ಅವನವರೇ ಅದ ಹಳ್ಳಿಯ ಜನರ ಅಭಿಪ್ರಾಯಗಳಿಗೂ ಏನೇನೂ ಸಂಬಂಧವಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಸುತ್ತಿ ಸುತ್ತಿ ಕತೆ ಹೇಳುವ ರೀತಿ, ಹೇಳುವುದಕ್ಕಾಗಿ ಉಪಯೋಗಿಸಿದ ಲಘು ಧ್ವನಿ ಸನ್ನಿವೇಶವನ್ನು ಸೃಷ್ಟಸುವುದರ ಜೊತೆಗೆ ರಂಗನ ಅಭಿಪ್ರಾಯಗಳಿಗೂ ಬೆಲೆ ಕಟ್ಟುತ್ತವೆ.............. ಈ ಮೂರು ಕತೆಗಳ ವಸ್ತು ಒಂದು ದೃಷ್ಟಿಯಲ್ಲಿ ರಂಗ ತನ್ನ ಸಮಾಜಕ್ಕೆ ಹೊಂದದ ಅಭಿಪ್ರಾಯಗಳ ನಿರರ್ಥಕತೆಯನ್ನು ಮತ್ತು ಸಮಾಜದಲ್ಲಿ ಭಾವನೆಗಳನ್ನು ವ್ಯಕ್ತಪಡಿಸುವ ರೀತಿಯನ್ನು ಅರಿತುಕೊಳ್ಳುವುದು. ಅದಕ್ಕಾಗಿಯೇ ಏನೋ ಮೂರು ಕತೆಗಳನ್ನು ಹೇಳುವವನು ರಂಗನಿಗಿಂತ ಹೆಚ್ಚು ವಯಸ್ಸಾದವನು ಮತ್ತು ತಾನು ಮತ್ತು ರಂಗನಿರುವ ಸಮಾಜ ವ್ಯವಸ್ಥೆ ಸರಿಯಾದುದು ಎಂದು ನಂಬಿದವನು. ಆದ್ದರಿಂದಲೇ ರಂಗನ ಅಭಿಪ್ರಾಯಗಳು ಸಮಾಜದ ಸರಿ ಒಪ್ಪುಗಳ ಕಲ್ಪನೆಯನ್ನು ಬಿಟ್ಟು ಅಡ್ಡ ಹರಿದಂಥವು ಎಂಬ ನಂಬಿಕೆ ಕತೆಗಳ ಬೆನ್ನು ಮೂಳೆಯಾಗಲು ಸಾಧ್ಯ".[1]

ಮಾಸ್ತಿಯವರ ಮೊದಲು ಕತೆಗಳಾದ ರಂಗಪ್ಪನನ್ನು ಕುರಿತಂತ ಹಾಸ್ಯ, ಪ್ರಣಯದ

---

1. ಎಚ್.ಎಸ್. ರಾಘವೇಂದ್ರರಾವ್, ಶತಮಾನದ ಸಾಹಿತ್ಯ ವಿಮರ್ಶೆ : (ಎಂ.ಜಿ. ಕೃಷ್ಣಮೂರ್ತಿ, ಮಾಸ್ತಿಯವರ ಸಣ್ಣ ಕಥೆಗಳು) ಪು.ಸಂ. ೪೧೮, ೪೧೯ (ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರೋಡ್, ಬೆಂಗಳೂರು – ೨೦೦೧)

ಕತೆಗಳ ಬಗ್ಗೆ ಎಂ.ಜಿ.ಕೆ. ರವರ ನಿಲುವು ಅರ್ಥಗರ್ಭಿತವಾಗಿದೆ. ರೊಮ್ಯಾಟಿಂಕ್ ಕಾಲದಲ್ಲಿ ಮಾಸ್ತಿಯವರು ರಂಗನ ಮುಖಾಂತರ ಪ್ರಣಯದ ರೀತಿಯನ್ನು ಪರಿಚಯಿಸಿರುವುದು ಅವರ ತಂತ್ರಗಾರಿಕೆಯ ಒಂದು ವಿಧವಾಗಿದೆ.

"ರಂಗಪ್ಪನ ಕೋರ್ಟ್‌ಷಿಪ್" ಹಾಸ್ಯದ ಚಿನ್ನದ ಗಟ್ಟಿ, ಅಂತೂ ವಾಕ್ಯ ವಾಕ್ಯದಲ್ಲೂ ಹಾಸ್ಯರಸವನ್ನು ಹರಿಸುವ ಕಲಾಪೂರ್ಣ ಕತೆ. ಹಸೆಯ ಮೇಲೆ ಕುಳಿತು ರತ್ನಮ್ಮ "ಗಡಿಗೇ ತಲೆ ಲಳಿಗೇ ಹೊಟ್ಟೆ ಕೊಳಗದ ಬಾಯಿ" ಎಂದು ಜರೆಯುವ ಹಾಡು ಮೊದಲುಗೊಂಡು ರಂಗಪ್ಪ – ರತ್ನಮ್ಮರ ಪ್ರಣಯ ಪತ್ರಗಳ ಪೂರ್ಣ ನಗುವಿನ ಮಹಾಪೂರವೇ ಹರಿಯುತ್ತದೆ. ನಗುವಿಗಾಗಿಯೇ ನಗುವನ್ನು ತರಬಲ್ಲ ಅಪ್ಪಟ ವಿನೋದಪ್ರಿಯ ಕಲಾ ಕುಸುಮ ಈ ಕಥೆ "ರಂಗಪ್ಪನ ಕೋರ್ಟ್‌ಷಿಪ್".

ರಂಗಪ್ಪ ರೊಮಾನ್ಸ್‌ನ ಕನಸಿನ ಪ್ರಪಂಚದ ನಿರಂತರ ನಿವಾಸಿ. ಹೆಂಡತಿಯ ಕಾಗದಕ್ಕಾಗಿ ಚಾತಕ ಪಕ್ಷಿಯಂತೆ ಕಾದಿದ್ದಾನೆ. ತನ್ನ ಕಾಗದಕ್ಕೆ ಉತ್ತರ ಬಂದೀತೇ ಎಂದು ತಪಸ್ಸಿನಲ್ಲಿ ಮಗ್ನನಾದವನಿಗೆ ಹೆಂಡತಿ ರತ್ನಳ ಕಾಗದ ಪ್ರತ್ಯಕ್ಷವಾಯಿತು. ಒಡೆದು ನೋಡಿದ;

"ತೀ॥ ರಂಗರಾಯರಿಗೆ ನೀವು ಬರೆದ ಕಾಗದ ಬಂತು, ನಾವೆಲ್ಲರು ಸೌಖ್ಯ. ಇನ್ನೇನು ವಿಶೇಷವಿಲ್ಲ, ರತ್ನಮ್ಮ".[2]

ಹುಡುಗಿಗೆ ಹೇಳಿಕೊಟ್ಟಿದ್ದಿರಬೇಕು, ದೊಡ್ಡವರಿಗೆ ಬರೆಯಬೇಕಾದರೆ "ತೀರ್ಥರೂಪು" ಎಂದು ಬರೆಯಬೇಕೆಂದು. ಆ ಜ್ಞಾನವನ್ನು ಈಗ ಬಳಸಿಕೊಂಡಳು! ಸಾರ್ಥಕವಾಯಿತು..!! ರಂಗಪ್ಪ ಅವಳಿಗೆ ಬರೆದ.

"ಪ್ರಿಯೆ,

ನಿನ್ನ ಕಾಗದ ಬಂತು. ನನಗೆ ಅದರ ಮೊದಲನ್ನು ನೋಡಿ ಬಹಳ ಆಶ್ಚರ್ಯವಾಯಿತು. ಹೀಗೆ ಬರೆಯುವುದುಂಟೆ? ನಾನು ಮೇಲೆ ಬರೆದಿರುವುದನ್ನು ನೋಡು. ಅದರಂತೆ ಬರೆಯಬೇಕು. ನಾನು ಕ್ಷೇಮ, ನಿನ್ನ ಕ್ಷೇಮಕ್ಕೆ ಬರೆಯುವುದು.

ಇತಿ....."

ಅದಕ್ಕೆ ಉತ್ತರ ——

"ಪ್ರಿಯನೆ,

ನಿಮ್ಮ ಕಾಗದ ಬಂತು. ನಾನು ಸೌಖ್ಯ.

ರತ್ನಮ್ಮ".

---

2. ಮಾ.ವೆ. ಅಯ್ಯಂಗಾರ್, ಸಣ್ಣಕತೆಗಳು; ಸಂಪುಟ ೧ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು– ೧೯೮೯) ಪು.ಸಂ. ೩೭.

ರಂಗಪ್ಪ ಬದಲಿಗೆ ಬರೆದ; ಏನೆಂದರೆ;

"ಪ್ರಿಯೆ,

ನಿಮ್ಮ ಚಿಕ್ಕಮ್ಮನವರು ನಿಮ್ಮ ಚಿಕ್ಕಪ್ಪನವರನ್ನು ಕರೆಯಬೇಕಾದರೆ ಪ್ರಿಯನೆ ಎಂದು ಹೇಳುತ್ತಾರೆಯೇ? ನೀನು ನನಗೆ ಹಾಗೆ ಬರೆದಿದ್ದೀಯಲ್ಲ. ನಮ್ಮಲ್ಲಿ ವಾಡಿಕೆ, ಗಂಡನನ್ನು ಪ್ರಿಯರೆ, ಇತ್ಯಾದಿ ಬರೆಯಬೇಕು. ನಿನಗೆ ಇದು ತಿಳಿಯದೇ ಇಲ್ಲ. ನಾನು ಸೌಖ್ಯ, ನಿನ್ನ ಕ್ಷೇಮ ಸಮಾಚಾರಕ್ಕೆ ಕಾಗದ ಬರೆಯುವುದು.

ಇತಿ......"

ಅದಕ್ಕೆ ಬದಲು;

"ನಮ್ಮ ಚಿಕ್ಕಮ್ಮನವರು ಚಿಕ್ಕಪ್ಪನವರನ್ನು 'ಏನೆಂದರೆ' ಎಂತ ಹೇಳುತ್ತಾರೆ. ನನಗೆ ಕಾಗದ ಬರೆಯುವುದಕ್ಕೆ ಬರುವುದಿಲ್ಲ. ಇನ್ನು ಮೇಲೆ ನಾನು ಬರೆಯುವುದಿಲ್ಲ.

ರತ್ನಮ್ಮ".[3]

– ನಂತರ ರಂಗಪ್ಪ ಮೂರು ಕಾಗದ ಬರೆದ. ಜವಾಬು ಇಲ್ಲವಾಯಿತು. ರಂಗಪ್ಪನ ಪ್ರಣಯ, ರತ್ನಮ್ಮನ ಮುಗ್ಧತೆಯನ್ನು ಈ ಪತ್ರಗಳು ತಿಳಿಸುತ್ತವೆ.

ಇಷ್ಟಕ್ಕೆ ರಂಗಪ್ಪ ಮತ್ತು ರತ್ನಳ ಪತ್ರ ವ್ಯವಹಾರ ಮುಗಿಯುವುದಿಲ್ಲ. ರಂಗಪ್ಪ ಏನೇನೋ ಸಮಾಧಾನ ಹೇಳಿ ಪುನಃ ರತ್ನಮ್ಮ ಕಾಗದ ಬರೆಯುವ ಹಾಗೆ ಮಾಡಿದ. ಆದರೆ ರತ್ನಮ್ಮ ಕಾಗದ ಬರೆದರೂ ವಿಷಯವೇನೋ ಮೊದಲಿನ ವಿಷಯವೇ, ಆಗಿತ್ತು. ಇನ್ನು ಬೇರೆ ಏನನ್ನಾದರೂ ಬರೆಯಬಾರದೆ ಎಂದು ರಂಗಪ್ಪ ಒಂದು ಕಾಗದ ಬರೆದನು.

ಅದಕ್ಕೆ ರತ್ನಮ್ಮ ಬರೆದ ಉತ್ತರದ ಕಾಗದ;

"ಪ್ರಿಯರೆ,

ಗೂಳಿ ಗುಟ್ಟರು ಹಾಕುತ್ತದೆ. ನಾಯಿ ಬಗುಳುತ್ತದೆ. ಬೆಕ್ಕು ಮಿಯಾವ್ ಎನ್ನುತ್ತದೆ. ಕಾಗೆ ಕರ್ರೆನ್ನುತ್ತದೆ. ಕತ್ತೆ ಕಿರುಚುತ್ತದೆ. ನವಿಲು ಕೇಕೆ ಹಾಕುತ್ತದೆ.

ಮಿರುಮಿರುಗುವ ಹಾ ಕಿರುತಾರಗೆಯೇ

ಅರಿಯೆನು ನಾನೆಲೆ ನೀನಾರೋ

3. ಮಾ.ವೆ. ಅಯ್ಯಂಗಾರ್, ಸಣ್ಣಕತೆಗಳು: ಸಂಪುಟ ೧ (ಎಂ.ಜೆ.ಪಿ.ಕೆ. ಟ್ರಸ್ಟ್, ಬೆಂಗಳೂರು– ೧೯೮೯) ಪು.ಸಂ. ೩೪

ಧರೆಗಿಳಿಯದೆ ನೀನಿರುತಿಹೆ ದೂರದಿ

ನೆರೆತೊಳಗುವ ವಜ್ರದ ತೆರದಿ

ಕುರಿ 'ಬ್ಯಾ' ಎನ್ನುತ್ತದೆ.

ಇನ್ನೇನು ವಿಶೇಷವಿಲ್ಲ

ರತ್ನಮ್ಮ".[4]

ಹೀಗೆ ಕಥೆ ಮುಂದಕ್ಕೆ ಸಾಗುತ್ತದೆ. ಗಂಡನಿಗೆ ತೀ॥ ರಂಗರಾಯರಿಗೆ ಎಂದು ಬರೆಯುವ ಹೆಂಡತಿ, ಹೆಂಡತಿಯ ಕಾಗದಕ್ಕಾಗಿ ಕುದಿಯುವ ಗಂಡ ಇವರ ಎಳೆಯ, ಅರಳುತ್ತಿರುವ ಮುಗ್ಧ ಪ್ರೇಮದ ಜಗತ್ತು ಮನವನ್ನು ಸೂರೆಗೊಳ್ಳುತ್ತದೆ. ಶುದ್ಧ ಹಾಸ್ಯದ ಕಣ್ಣಿನಲ್ಲಿ ಕಂಡ ಗ್ರಾಮಜೀವನದ ಮೂರು ಸಾಮಾಜಿಕ ಪ್ರಹಸನಗಳಾಗಿ ಇವು ಕಂಗೊಳಿಸುತ್ತವೆ. ಮಾಸ್ತಿಯವರ ಜೀವನ ಪ್ರಜ್ಞೆಗೆ, ರಸಿಕತೆಯ ಪ್ರಜ್ಞೆಗೆ, ಅಭಿವ್ಯಕ್ತಿಯ ಶಕ್ತಿಗೆ ಈ ಕತೆಗಳು ನಿದರ್ಶನಗಳಾಗಿವೆ.

### ➢ ವೆಂಕಟಶಾಮಿಯ ಪ್ರಣಯ

'ವೆಂಕಟಶಾಮಿಯ ಪ್ರಣಯ' ದುರಂತ ಪ್ರೇಮವನ್ನು ಚಿತ್ರಿಸುವ ಕಥೆ. ನಾಯಿಂದನ ಮಗನಾದ ವೆಂಕಟಶಾಮಿ ದೊಂಬರ ಹುಡುಗಿಯೊಬ್ಬಳನ್ನು ಪ್ರೀತಿಸಿ ತಂದೆ ತಾಯಿ ಹಾಗೂ ಊರಿನವರ ಪ್ರಕೋಪಕ್ಕೆ ತಿರಸ್ಕಾರಕ್ಕೆ ತುತ್ತಾಗಿ ಪ್ರಣಯಕ್ಕೋಸ್ಕರ ಊರನ್ನೇ ತೊರೆದ ದೊಂಬರ ಹುಡುಗಿಯನ್ನು ಸಮಾಜಕ್ಕೆ ವಿರುದ್ಧವಾಗಿ ಪ್ರೀತಿಸುತ್ತಾನೆ. ಅವಳ ಆಕರ್ಷಣೆಗೆ ಒಳಗಾಗಿ ಅವಳೊಂಡನೆ ಓಡಿಹೋಗುತ್ತಾನೆ. ದೊಂಬರ ಹುಡುಗಿಯ ಅಪ್ಪನೂ ಅದನ್ನು ವಿರೋಧಿಸುತ್ತಾನೆ. ಎಲ್ಲ ಕಡೆಯೂ ಈ ವಿರೋಧವನ್ನು ಎದುರಿಸಲಾರದೆ ವ್ಯಥೆಗೊಂಡು ಹಿಂತಿರುಗಿಬಂದು ಜ್ವರ ಬಂದು ಸಾಯುತ್ತಾನೆ. ಸಾಯುವ ಕಾಲದಲ್ಲಿ ಅವಳ ಸ್ಮರಣೆಯೇ ಅವನಿಗೆ ಮೂರು ರಾತ್ರಿ ತನ್ನ ಪ್ರೇಮಿಯೊಡನೆ ಮಲಗಿದ್ದುದರಿಂದ ತಮ್ಮ ಹೊಲದ ಪಕ್ಕದ ಆ ಹುಲ್ಲಿನ ಜಾಗದಲ್ಲಿ ತನ್ನ ಸಮಾಧಿಯಾಗಬೇಕೆಂದು ಆತನ ಬಯಕೆ. ಇದು ದೊಂಬರ ಹುಡುಗಿಯ ಬಗೆಗೆ ಅವನಲ್ಲಿದ್ದ ಅಕುಟಿಲವಾದ, ಸಾತ್ವಿಕವಾದ ಶುದ್ಧ ಪ್ರೇಮವನ್ನು ತೋರಿಸುತ್ತದೆ.

ಈ ಕತೆಯ ಮೂಲಕ ಮಾಸ್ತಿಯವರು ಇಂತಹ ನಿರ್ವ್ಯಾಜ್ಯ ಪ್ರೇಮಕ್ಕೆ ಅಡ್ಡಬರುವ ಸಮಾಜದ ರೂಢಿನಿಯಮಗಳನ್ನು ತಿರಸ್ಕರಿಸುವುದಿಲ್ಲ. ಆ ಸಮಾಜದ ರೂಢಿ ನಿಯಮಗಳ ಬಗ್ಗೆ ಅವರಿಗೆ ಅಪಾರ ಒಲವಿದೆ. ಹಾಗೆಂದು ಅವರಿಗೆ ಅವರಿಬ್ಬರ ಪ್ರೇಮದ ಬಗ್ಗೆ

4. ಮಾ.ವೆ. ಅಯ್ಯಂಗಾರ್; ಸಣ್ಣಕತೆಗಳು: ಸಂಪುಟ ೧ (ಎಂ.ಜಿ.ಪಿ.ಕೆ. ಟ್ರಸ್ಟ್, ಬೆಂಗಳೂರು-೧೯೮೯) ಪು.ಸಂ. ೩೫

ಬೇಸರವಿಲ್ಲ. ಅಂತಹ ಪ್ರೀತಿಯ ಬಗ್ಗೆ ಅವರಿಗೆ ಅಪಾರ ಗೌರವವೂ ಇದೆ. ಆದ್ದರಿಂದ ಅದನ್ನಷ್ಟೇ ಅರ್ಥಪೂರ್ಣವಾಗಿ ವಿವರಿಸುತ್ತಾರೆ. ಆ ಪ್ರೇಮಿಗಳ ಬಗ್ಗೆ ಅವರಿಗೆ ಸಹಾನುಭೂತಿ ಇದೆ. ಅನುಕಂಪ ಇದೆ. ಹೀಗಿರುವಾಗ ಮಾಸ್ತಿಯ ನಿಲುವು ಯಾವುದು? ಬಹುಶಃ ಮಾಸ್ತಿಯವರಿಗೆ ಒಂದು ರೀತಿಯ ಸಂಘರ್ಷವಿದೆ. ಗೊಂದಲಗಳಿವೆ ಎಂದು ಕಾಣುತ್ತದೆ. ಅವರ ಗೊಂದಲಗಳಿಗೆ ಮುಖ್ಯ ಕಾರಣಗಳು ಬಹುಶಃ ಈ ರೀತಿಯವು ಒಂದು ತಾವು ಹುಟ್ಟಿಬೆಳೆದು ಬಂದ ವೈದಿಕ ಧರ್ಮ ಸಂಪ್ರದಾಯದ ಕಟ್ಟು ಪಾಡುಗಳು ಒಂದು ಕಡೆ, ಇನ್ನೊಂದು ಕಡೆ ತಾವು ಪಡೆದ ವಿದ್ಯಾಭ್ಯಾಸ, ಆಧುನಿಕ ಜಗತ್ತಿನ ಒಡನಾಟ, ಮೇಲ್ದರ್ಜೆಯ ಹುದ್ದೆ, ಹೀಗೆ ಹಲವು ರೀತಿಯ ಚಿಂತನೆಗಳಿಂದಾಗಿ ಮಾಸ್ತಿಯವರು ಯಾವ ಕಡೆ ನಿಲ್ಲುತ್ತಾರೆಂದು ತಿಳಿಯುವುದು ಕಷ್ಟವಾಗುತ್ತದೆ.

ಮಾಸ್ತಿಯವರಿಗೆ ಗಾಂಧೀಜಿಯವರ ಗ್ರಾಮ ಪ್ರೀತಿಯ ಪ್ರಭಾವವಿರುವಂತೆ ಕಾಣುತ್ತದೆ. ಹಳ್ಳಿಗಳ ಜನಸಾಮಾನ್ಯರ ಬದುಕು, ಅಲ್ಲಿ ಪರಸ್ಪರ ಅವಲಂಬನೆಯ ಬದುಕು, ನಂಬಿಕೆ ಇವುಗಳ ಬಗ್ಗೆ ವಿಶೇಷವಾದ ಆದರವಿದೆ. ಹಳ್ಳಿಯ ಬದುಕಿನಲ್ಲಿ ನಾಯಿಂದನಿಗೆ, ಕಮ್ಮಾರನಿಗೆ, ಬಡಗಿಗೆ, ಕುಂಬಾರನಿಗೆ ಹೀಗೆ ಎಲ್ಲರಿಗೂ ಸ್ಥಾನಮಾನವಿದೆ. ಆ ಸಮಾಜದಲ್ಲಿ ಗೌಡ ಹೇಗೆ ಮುಖ್ಯವೋ ಅಲ್ಲಿಯ ನಾಯಿಂದ ಇತರರೂ ಅಷ್ಟೇ ಮುಖ್ಯವಾಗಿದ್ದಾರೆ. ಇಲ್ಲಿ ಯಾರೂ ಅಮುಖ್ಯರಲ್ಲ. ಕತೆಯಲ್ಲಿಯೇ ಒಂದು ಕಡೆ ಮಾಸ್ತಿ ಊರಿನ ಗೌಡನ ಜೊತೆ ಮಾತನಾಡಿಸುತ್ತಾರೆ. ಆ ಗೌಡ.......

> "............. ನೋಡಿರ, ನಮ್ಮೂರ ನಾಯಿಂದ ನಮ್ಮೂರಿನ ಕಂಬಳಾನ ಬೇರೆಯವರು ದುಡಿಯೋ ಹಂಗೆ ಮಾಡಿಹೋದ" ಎಂದನು. ನಾನು "ಪಾಪ ಅವನು ಬದುಕಿದ್ದರೆ ಇನ್ನೂ ಏನು ಸುಖಪಡಬಹುದಾಗಿತ್ತೋ? ಚಿಕ್ಕಂದಿನಲ್ಲೇ ಹೋದ, ನಿಮಗೆ ಯಾರು ಕೆಲಸ ಮಾಡಿದರೆ ಏನು" ಎಂದೆ ಗೌಡ "ಅದೆಲ್ಲಾ ಬೆಂಗಳೂರ ಮಾತು ಸ್ವಾಮಿ ಹಳ್ಳಿ ಜನ ಹಂಗನ್ನೋಕಾಗ್ತದೆಯೇ. ನಮ್ಮೂರಿನ ಮಿರಾಸಿಗೆ ಬೇರೆ ಊರಿನೋರು ಹಚ್ಚಡ ಹರ್ವೋ ಹಂಗಾಯಿತು. ನಮ್ಮ ನಾಯಿಂದನಾದ್ರೆ ಯಾಕೋ ಎನ್ನಬಹುದು. ಈ ಬೇರೆ ಊರೋರ್ಕ ಮಾತ್ನಾಡ್ಲೋಕಿಲ್ಲ" ಎಂದ.[5]

ಇಲ್ಲಿ ಗೌಡನ ಗಾಡ ಪ್ರೇಮ, ಹಳ್ಳಿಗಳಲಿ ಪ್ರತಿಯೊಬ್ಬ ಸಾಮಾನ್ಯನಿಗೂ ಇರುವ ಸ್ಥಾನ ಮಾನಗಳನ್ನು ಕಂಡು ಮಾಸ್ತಿ ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ದೊಂಬರ ಹುಡುಗಿಯಿಂದ ಆಕರ್ಷಿತನಾದ ವೆಂಕಟಶಾಮಿಯು ಅವಿವೇಕಿಯಾಗಿ ವರ್ತಿಸಿದ ಎಂಬ ಧ್ವನಿ ಬರುವುದಿಲ್ಲ. ಅವನದು ಆರಾಧಿಸುವಂಥ ಮುಗ್ಧ ಪ್ರೇಮ. ಅವನಿಗಷ್ಟೇ ಅಲ್ಲ, ಅವನು ಕಳೆದುಕೊಂಡ ಹುಡುಗಿಗಾಗಿಯೂ ಮನಸ್ಸು ಕರಗುವಂತ ಚಿತ್ರಣ ಈ ಕತೆಯಲ್ಲಿದೆ.

---

5. ಮಾ.ವೆ. ಅಯ್ಯಂಗಾರ್, ಸಣ್ಣಕತೆಗಳು; ಸಂಪುಟ ೨ (ಎಂ.ಜಿ.ವಿ.ಕೆ. ಟ್ರಸ್ಟ್, ಬೆಂಗಳೂರು- ೧೯೮೯) ಪು.ಸಂ.೪೧, ೪೨

## ➢ ಗೌತಮಿ ಹೇಳಿದ ಕತೆ

ರಾಜೇಂದ್ರ ಚೆನ್ನಿರವರು ಹೇಳುವಂತೆ "ಗೌತಮಿ ಹೇಳಿದ ಕತೆ" ಕನ್ನಡ ಸಾಹಿತ್ಯದಲ್ಲೇ ಅನನ್ಯವಾದುದು. ತನ್ನ ತೀವ್ರತೆ, ಎಚ್ಚರದ ಉನ್ನತ ಕಲೆಗಾರಿಕೆಯಲ್ಲಿ ಮಾಸ್ತಿಯವರ ಕತೆಗಳಲ್ಲಿ ವಿಶಿಷ್ಟವಾದುದು ಎನ್ನುವ ಮೂಲಕ ಈ ಕತೆಯ ಶ್ರೇಷ್ಠತೆಯನ್ನು ತಿಳಿಯಪಡಿಸುತ್ತಾರೆ. 'ಗೌತಮಿ ಹೇಳಿದ ಕತೆ'ಯ ಗೌತಮಿ, ಮಾಲಿನಿ ಎಂಬ ಹುಡುಗಿಯ ಕತೆಯೆಂದು ಹೇಳುವುದು ತನ್ನ ಕತೆಯನ್ನೇ. ಆದರೆ ಈ ಸಂಗತಿ ಸೂಚ್ಯವಾಗಿ ಗೊತ್ತಾಗುವುದು ಕತೆಯ ಅಂತ್ಯದಲ್ಲಿ.

ಮಾಲಿನಿ ಹುಡುಗಿಯಾಗಿದ್ದಾಗಿನಿಂದಲೂ ಭಾರದ್ವಾಜ ಮತ್ತು ದತ್ತ ಎಂಬಿಬ್ಬರೊಡನೆಯೂ ಸಲಿಗೆಯಿಂದಿದ್ದಳು. ಮದುವೆಯ ವಯಸ್ಸು ಬಂದಾಗ ಅವಳ ಮನಸ್ಸು ಭಾರದ್ವಾಜನ ಕಡೆಗೆ ಒಲಿಯಿತು. ಅವರಿಬ್ಬರೂ ಮದುವೆಯಾಗತಕ್ಕದೆಂದು ಗೊತ್ತಾಯಿತು; ದೇಹಸಂಬಂಧ ಬೆಳೆಯದಿದ್ದರೂ ಒಂದು ಹುಣ್ಣಿಮೆಯ ದಿನ ಚುಂಬನ ವಿನಿಮಯವಾಗಿ ಅವರಿಬ್ಬರಲ್ಲೂ ತಾವು ಗಂಡಹೆಂಡಿರೆಂಬ ಭಾವನೆ ಮೂಡಿತು. ಆದಾದ ಮಾರನೆ ದಿನವೆ ಮಾಲಿನೀ ನದಿ ಭಾರದ್ವಾಜನನ್ನು ಬಲಿ ತೆಗೆದುಕೊಂಡಿತು. ಅವರಿಬ್ಬರಿಗೂ ಮದುವೆಯಾಗಿರಲಿಲ್ಲವಾದ್ದರಿಂದ ಮಾಲಿನಿಯ ದುಃಖ ಯಾರಿಗೂ ಅರ್ಥವಾಗಲಿಲ್ಲ. ಭಾರದ್ವಾಜನು ನೀರಿನಲ್ಲಿ ಮುಳುಗಿ ಸತ್ತ ಮೇಲೆ ಯೌವ್ವನ ಸಹಜ ಆಕಾಂಕ್ಷೆಯಿಂದ ದತ್ತನಲ್ಲಿ ಪ್ರಣಯ ಭಿಕ್ಷೆ ಕೇಳುತ್ತಾಳೆ. ಮೊದಲಿಗೆ ದತ್ತನೂ ಅವಳನ್ನು ಮದುವೆಯಾಗಬೇಕೆಂದು ಆಸೆಯಿಟ್ಟುಕೊಂಡಿರುತ್ತಾನೆ. ಆದರೆ ಮಾಲಿನಿ ಭಾರದ್ವಾಜನನ್ನು ಮದುವೆಯಾಗುತ್ತಾಳೆಂದು ತಿಳಿದ ಮೇಲೆ ದತ್ತ ಅವಳೊಡನೆ ಒಡನಾಟವನ್ನು ಅನಿವಾರ್ಯವಾಗಿ ಕಡಿಮೆ ಮಾಡಿರುತ್ತಾನೆ. ನಂತರ ಸಾಯುವವರೆಗೂ ಬ್ರಹ್ಮಚಾರಿಯಾಗಿಯೇ ಇರಬೇಕೆಂದು ನಿಶ್ಚಯಿಸುತ್ತಾನೆ. ಮಾಲಿನಿ ಭಾರದ್ವಾಜನ ಸಾವನ್ನು ಕಂಡು ದುಃಖವನ್ನು ತಡೆಯಲಾರದೆ ಹೊಳೆಗೆ ಬಿದ್ದಾಗ ದತ್ತ ಅವಳನ್ನು ಬದುಕಿಸಿದ. ಕಾಲ ಕಳೆದಂತೆ ಮಾಲಿನಿಯ ದುಃಖ ಕಡಿಮೆಯಾಗತೊಡಗಿತು. ಯೌವ್ವನ ಸಹಜವಾದ ಪ್ರೀತಿ ಅವಳಲ್ಲಿ ಮೊಳಕೆಯೊಡೆಯಿತು. ಅದಕ್ಕಾಗಿ ದತ್ತನ ಕಡೆ ಅವಳ ಮನಸ್ಸು ಸೆಳೆಯಿತು. ಅವಳು ಎಷ್ಟು ತಡೆದರೂ ಮನಸ್ಸು ಜಗ್ಗಲಿಲ್ಲ. ಕೊನೆಗೆ ಅವಳು ದತ್ತನನ್ನು ಮದುವೆಯಾಗೆಂದು ಕೇಳಿದಳು. ತನ್ನ ಕಾಮದ-ಪ್ರೇಮದ ಸವಾಲು ಒಡ್ಡುತ್ತಾಳೆ. ದತ್ತನು ಕೂಡ ಈ ಪ್ರವೃತ್ತಿಯನ್ನು ಅನುಮಾನಿಸುವುದಿಲ್ಲ. ಮಾಲಿನಿ ಆ ರಾತ್ರಿ ತನ್ನ ಬಳಿಗೆ ಬಂದಾಗ ಅವಳ ಉದ್ದೇಶವೇನೆಂದು ದತ್ತನಿಗೆ ಗೊತ್ತು. ಆದರೂ ಗೊತ್ತಿಲ್ಲವೆಂಬಂತೆ ನಟಿಸಿದ. ಆದರೆ ಮಾಲಿನಿಗೆ ಆಗ ನಾಚುವ ಮನೋವೃತ್ತಿಯಿರಲಿಲ್ಲ. ಮುಚ್ಚುಮರೆಯಿಲ್ಲದೆ "ನಿನ್ನಲ್ಲಿ ಬರಬೇಕೆನಿಸಿತು ಬಂದೆ" ಎಂದಳು. ಅನಂತರ ದತ್ತನ ಧೃತಿಯನ್ನು ನಡುಗಿಸುವಂತೆ "ಮದುವೆ ಇಲ್ಲದಿದ್ದರೆ ಬೇಡ, ಜೊತೆಯಾಗಿರೋಣ"

ಎಂದಳು. ಅವನು 'ಅಕ್ಕ' ಎಂದು ಸಂಬೋಧಿಸಿದಾಗ "ನಿನ್ನ ಅಕ್ಕನಿಗೆ ಬೆಂಕಿಯಿಡು" ...... ಒಂದು ಸಲ ನನ್ನನ್ನು ತೆಗೆದುಕೊ, ಒಂದು ಸಲ ನಿನ್ನನ್ನು ಕೊಡು....... ಇದೂ ಆಗದಿದ್ದರೆ ನಾನು ಹೊಳೆಯಲ್ಲಿ ಹೋಗಿ ಮುಳುಗುತ್ತೇನೆ" ಎಂದಾಗಲೂ ದತ್ತ ಧೃತಿಗೆಡಲಿಲ್ಲ. ಒಂದು ಕಾಲಕ್ಕೆ ಅವಳನ್ನು ಮದುವೆಯಾಗಬೇಕೆಂದಿದ್ದವನು ಈಗ ಅವಳಾಗಿಯೇ ಬಂದು ಅಂಗಲಾಚುತ್ತಿದ್ದರೂ ಅವಳನ್ನು ತಿರಸ್ಕರಿಸುತ್ತಾನೆ. ಎಲ್ಲೋ ಒಂದು ಕಡೆ ದತ್ತ ಆಶ್ರಮದ ಗುರುವಾಗುವ ಆಸೆ ಮಾಲಿನಿಯ ಪ್ರೇಮವನ್ನು ತಡೆಯಿತೆಂದು ಹೇಳಬಹುದಾದರೂ ಆ ರೀತಿಯ ಅನುಮಾನಕ್ಕೆ ಎಡೆಮಾಡಿಕೊಡದಂತೆ ಮಾಸ್ತಿಯವರು ಕತೆಯನ್ನು ಮುಂದುವರಿಸುತ್ತಾರೆ.

ಮಾಲಿನಿ ಸಂಕೋಚವನ್ನು ಗಾಳಿಗೆ ತೂರಿಬಿಟ್ಟು ಹಾಗೆ ಬಂದು 'ನನ್ನನ್ನು ತೆಗೆದುಕೊ' ಎಂದಾಗ ದತ್ತ ಅವಳಿಗೆ ಶರಣಾಗತನಾದ (ಅವಳ ಕಾಮಕ್ಕಲ್ಲ) ಅವಳ ಕಾಲಿಗೆ ಬಿದ್ದು ಅವಳ ನೆರವನ್ನು ಬೇಡಿದ;

> "ನೀನು ನನ್ನನ್ನು ಕಾಪಾಡಬೇಕು. ಪರೀಕ್ಷೆ ಮಾಡಬೇಡ, ನೀನು ಹೆಣ್ಣು; ಆದಿಶಕ್ತಿ; ನಿನಗೆ ಪತನವೆಂಬುದಿಲ್ಲ. ನಾನು ಹೆಣ್ಣಲ್ಲ. ನನಗೆ ನಿನಗಿರುವ ಆತ್ಮಶುದ್ಧಿಯಲ್ಲಿ..... ನನ್ನ ಮೇಲೆ ಅನುಗ್ರಹ ಮಾಡು. ನನ್ನನ್ನು ಕಾಪಾಡು"[6].

ಆಗ ಅವನ ಅಸಹಾಯತೆ, ಅವನ ದನಿಯಲ್ಲಿ ಕಂಡ ಅಂಗಲಾಚಿಕೆಯ ಎಳೆ, ಅವಳ ತಾಯ್ತನವನ್ನು ಎಚ್ಚರಿಸಿತು. "ಗಂಡೆಂದು ಅವನನ್ನು ಅಪ್ಪಿಕೊಳ್ಳಬಯಸಿದ ತೋಳು ಆಗ ಅವನನ್ನು ಮಗುವಂತೆ ಸಂತೈಸಲು ಬಯಸಿತು".

ಮಾಲಿನಿಯ ಪಾತ್ರ ಬಹು ಸೊಗಸಾಗಿ ಮೈತುಂಬಿ ಬಂದಿದೆ. ಅವಳು ಕೊನೆಯ ಸಾರಿ ಪ್ರೇಮಭಿಕ್ಷೆಯನ್ನು ಬೇಡುವ ದೃಶ್ಯ ಶಕ್ತಿಯುಕ್ತವಾಗಿದೆ. ಮಾಸ್ತಿಯವರು ಆದರ್ಶೀಕರಣಕ್ಕೆ ಮನಸೋಲುವವರಲ್ಲ, ವಸ್ತುಸ್ಥಿತಿಯನ್ನು ದಿಟ್ಟಿಸಿ ನೋಡಲು ಹಿಂಜರಿಯುವುದಿಲ್ಲ ಎಂಬುದಕ್ಕೆ ಅವಳನ್ನು ಚಿತ್ರಿಸಿರುವ ರೀತಿಯೂ ಒಂದು ಸಾಕ್ಷಿ. ಈ ಕಥೆ ಆರಂಭವಾಗುವುದು ಮನಸ್ಸಿಗೆ ಉಲ್ಲಾಸಕೊಡುವ ಸಂಸಾರದ ಚಿತ್ರದಿಂದ. ಎಷ್ಟೋ ವರ್ಷಗಳ ಮೇಲೆ ಶಕುಂತಲೆ ಮತ್ತೆ ಆಶ್ರಯಕ್ಕೆ ಬಂದ ಸಂಭ್ರಮ, ಹುಡುಗಿಯರ ಹಾಸ್ಯ ಸಲ್ಲಾಪ, ಗೌತಮಿಯ ಉತ್ಸಾಹ – ಅದು ಹಬ್ಬದ ಮನೆ ಕಥೆ ಕೊನೆಗಾಣುವಾಗಲೂ ಅದೇ ಚಿತ್ರ. ಆದರೆ ಈಗ ಯುವತಿಯರಲ್ಲಿ ಕಾಣುವುದು ಅಷ್ಟಾಗಿ ಹರ್ಷದ ನಲಿವಲ್ಲ. ನೆಮ್ಮದಿಯ ಕಾಲದಲ್ಲಿ ಒಂದಿನ ಭಯಂಕರವಾದ ವಿಪತ್ತನ್ನೂ ಅದರಿಂದ ಪಾರಾದದ್ದನ್ನೂ ನೆನೆಯುವುದರಿಂದ ಬರುವ ಅಂತರ್ಮುಖತೆ, ವಿಚಾರ ಪರತೆ ಈ ಕತೆಯಲ್ಲಿ ಆರೋಗ್ಯಕರ ಸಹಾನುಭೂತಿಯನ್ನು

6. ಮಾ.ವೆ. ಅಯ್ಯಂಗಾರ್, ಸಣ್ಣಕತೆಗಳು; ಸಂಪುಟ ೩ (ಎಂ.ವೆ.ಮಿ.ಕೆ. ಟ್ರಸ್ಟ್, ಬೆಂಗಳೂರು– ೧೯೯೦) ಪು.ಸಂ.೩೯

ಇಟ್ಟುಕೊಂಡಿರುವ ಮಾಸ್ತಿ ಕೆಲವೊಂದು ಮೌಲ್ಯಗಳನ್ನು ಒಪ್ಪದೆಯೂ ಅರ್ಥಮಾಡಿಕೊಳ್ಳುವಂಥ ಲೇಖಕರು. ಗೌತಮಿ ಕಣ್ವರ ಸಂಯಮದಷ್ಟೇ ಗೌತಮಿಯ ಕಾಮವೂ ಆಕೆಯ ಬಾಳನ್ನು ನಿರ್ದೇಶಿಸುವ ಅಂಶವಾಗುತ್ತದೆ. ಅನುಸೂಯಾ, ಪ್ರಿಯಂವದೆಯರಿಗೆ ಆಕೆ ಮದುವೆ ಮಾಡಿಸುವುದು ಮೇಲುನೋಟಕ್ಕೆ ಈ ತರುಣಿಯರು ಕೆಡಬಾರದೆಂಬ ನೈತಿಕ ನಿಲುವಿನಿಂದ, ಕೆಟ್ಟಬಿಟ್ಟಾರೆಂಬ ಭಯದಿಂದ ಚೋದಿತವಾದಂತೆ ಕಂಡರೂ ಕಾಮದಿಂದ ವಂಚಿತಳಾದ ತನ್ನ ಅನುಭವದ ಹಿನ್ನೆಲೆಯಲ್ಲಿ ಅವರ ಬಾಳನ್ನು ಪೂರ್ಣಗೊಳಿಸುವ, ಸಫಲಗೊಳಿಸುವ ಇರಾದೆಯು ಗುಪ್ತವಾಗಿರುವುದನ್ನು ಗಮನಿಸಬಹುದು.

### ➢ ವಿಚಿತ್ರ ಪ್ರೇಮ

'ವಿಚಿತ್ರ ಪ್ರೇಮ' ಈ ಕತೆ ಮುಖ್ಯವಾಗಿ ವಾಲ್ಟೇರ್ ಮತ್ತು ಚಾಟ್‌ಲೈಟ್ ಪ್ರಭುವಿಯವರ ಪ್ರೇಮದ ಕತೆ. ಕತೆ ಆರಂಭವಾಗುವುದು ಈ ಪ್ರೇಮ ಪ್ರಕರಣ ಮುಗಿದು ಪ್ರಭುವಿ ಸೆಯಿಂಟ್ ಲ್ಯಾಂಬರ್ಟ್ ಎಂಬ ರೂಪವಂತ ತರುಣನಲ್ಲಿ ಅನುರುಕ್ತಳಾಗಿ ಆ ಸಂಬಂಧದಿಂದ ತಾಯಿಯಾಗಿ ಮಗುವೂ ಸತ್ತು ತಾನೂ ಮೃತ್ಯುಶಯ್ಯೆಯಲ್ಲಿರುವಾಗ ಅವಳಿಗೆ ಎನ್ನಿಸುತ್ತದೆ 'ವಾಲ್ಟೇರ್ ತನನ್ನು ಕ್ಷಮೆಯಿಂದ ಕಂಡರೇ ದೈವ ನನ್ನನ್ನು ಕ್ಷಮೆ ಯಿಂದ ಕಾಣುವುದು ನಿಶ್ಚಯ' ಎಂದು. ಅವಳು ಅವನು ಹೇಳಿದ ಒಂದು ಮಾತನ್ನು ನೆನೆಯುತ್ತಾಳೆ. 'ಒಲಿಯದ್ದು ನನಗೆ ಹೆಣ್ಣಲ್ಲ ನಲಿಸದ್ದು ನಿನಗೆ ಗಂಡಲ್ಲ' ಎಂಬುದು ಈ ಮಾತು. ಇದನ್ನು ಎಲ್ಲ ಹೆಣ್ಣು ಗಂಡು ನೆನಪಿನಲ್ಲಿಟ್ಟುಕೊಂಡರೆ ಬದುಕು ಚೆನ್ನ ಆದೀತು ಎಂದು ಅವಳು ಅಂದುಕೊಳ್ಳುತ್ತಾಳೆ. ತನ್ನ ಮತ್ತು ವಾಲ್ಟೇರ್‌ನ ಪ್ರೇಮದ ಬಗ್ಗೆ ಹೇಳುತ್ತಿದ್ದುದು ಸಾಯುವ ಚೆಲುವು ಸಾಯದ ಚೆಲುವಿಗೆ ಮುತ್ತು ಕೊಡುತ್ತಿದೆ' ಎಂದು. ಅವಳ ಮತ್ತು ಸೆಯಿಂಟ್ ಲ್ಯಾಂಬರ್ಟ್‌ನ ಚೆಲುವು ಜೇಡಿಮಣ್ಣಿನ ಚೆಲುವಾದರೆ ವಾಲ್ಟೇರ್‌ನದು ಅಮರ ಚೇತನದ ಚೆಲುವು - ವಾಲ್ಟೇರ್ ದೈಹಿಕವಾಗಿ ಕುರೂಪಿಯಾದರೂ, ಅವಳ ಮತ್ತು ವಾಲ್ಟೇರನ, ಹಾಗೂ ಮುಂದೆ ಅವಳ ಮತ್ತು ಸೆಯಿಂಟ್ ಲ್ಯಾಂಬರ್ಟ್‌ನ ಪ್ರೇಮ ಅವರ ಸಮಾಜದಲ್ಲಿ ಅನಪರಾಧ. 'ಜನ ಕಂಡಂತೆ ಅವಿವೇಕವಾಗಿ ನಡೆಯಬಾರದು, ಅಷ್ಟೆ; ಮುಖ್ಯವಾಗಿ ಗಂಡನಿಗೂ ಅವಳಿಗೂ ವಯಸ್ಸಿನಲ್ಲಿ ಹೆಚ್ಚಿನ ಅಂತರ. ಗಂಡ ಉದಾರಿ. 'ಹೆಂಡಿರಾದವಳು ಬಂದಿಯೆಂದು ನಾನು ತಿಳಿದಿಲ್ಲ. ಗಂಡ ಹೆಂಡಿರ ಸಂಬಂಧದಲ್ಲಿ ಇವನಲ್ಲಿ ಸರಿ ಎನ್ನುವ ನಡೆತೆ ಅವಳಲ್ಲಿಯೂ ಸರಿ' ಎನ್ನುವುದು ಅವನ ನಿಲುವು. ಇಂಥ ಪರಿಸ್ಥಿತಿಯಲ್ಲಿ 'ಜೀವ ಬಯಸಬಹುದಾದ ಒಳಿತನ್ನೆಲ್ಲ' ಅವಳು ಸವಿದಳು. ಸೇಯಿಂಟ್ ಲ್ಯಾಂಬರ್ಟ್ ರೂಪಿನ ಅನುಭವವನ್ನು ನೀಡಿದ ಎಂದು ಅವಳು ವಾಲ್ಟೇರ್‌ಗೆ ಹೇಳುತ್ತಾಳೆ. ಕತೆ ಆರಂಭವಾಗುವುದು ಅವಳ ಕರೆ ವಾಲ್ಟೇರನಿಗೆ ತಲುಪಿದಾಗ, ವಾಲ್ಟೇರ್ ಅವಳನ್ನು ಕಾಣಲು ಧಾವಿಸುತ್ತಾನೆ. ಅವನ ಅವಳ ಮಾತುಕತೆ, ಅವನ ಅವಳ ಗಂಡನ

ಮಾತುಕತೆ ಮತ್ತು ಅವನ ಮತ್ತು ಸೆಯಿಂಟ್ ಲ್ಯಾಂಬರ್ಟ್ ಮಾತುಕತೆ, ಇವುಗಳಲ್ಲಿ ಹಿಂದಿನ ಸಂಬಂಧಗಳು ತೆರೆದುಕೊಳ್ಳುತ್ತವೆ. ಅವುಗಳ ಮರು ಮೌಲ್ಯಮಾಪನವಾಗುತ್ತದೆ. ಒಂದು ಸಮಾಜದಲ್ಲಿ ಒಂದು ಘಟ್ಟದಲ್ಲಿ ಅಪರೂಪವಾಗಿ ಒದಗುವ ಪರಿಸ್ಥಿತಿಯಲ್ಲಿ ಸಾಧ್ಯವಾದ ಪ್ರೇಮ ಸಾಫಲ್ಯದ ಪ್ರಸಂಗ 'ವಿಚಿತ್ರ ಪ್ರೇಮ' ಎಂಬ ಕತೆಯಲ್ಲಿ ಯಶಸ್ವಿಯಾಗಿ ಚಿತ್ರಿತವಾಗಿದೆ.

ಮಾಸ್ತಿಯವರ ನೂರು ಕತೆಗಳಲ್ಲಿ ನೂರಾರರು ಪಾತ್ರಗಳು ನೂರಾರು ವೈವಿಧ್ಯತೆಗಳನ್ನು ಪಡೆದುಕೊಂಡಿವೆ. ಪ್ರೀತಿ, ಪ್ರೇಮ, ಪ್ರಣಯಕ್ಕೆ ಸಂಬಂಧಿಸಿದಂತೆ ಮಾಸ್ತಿಯವರು ಬಿಗಿಯಾದ ನಿಲುವನ್ನು ವ್ಯಕ್ತಪಡಿಸುವುದಿಲ್ಲ. ಆಗತಾನೆ ಇಂಗ್ಲೀಷ್ ವಿದ್ಯಾಭ್ಯಾಸ ಪಡೆದು ಬಂದು ರತ್ನಳನ್ನು ಪ್ರೀತಿಸುವ ರಂಗನ ಬಗ್ಗೆ ಮಾಸ್ತಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಎಲ್ಲರ ವಿರೋಧವಾಗಿಯೂ ನಾಯಿಂದನ ಮಗ ವೆಂಕಟಶಾಮಿ ದೊಂಬರ ಹುಡುಗಿಯನ್ನು ಪ್ರೀತಿಸಿ ದುರಂತ ಸಾವನ್ನು ಹೊಂದಿದಾಗ ಅವನ ಬಗ್ಗೆ ಕನಿಕರವೂ ಮಾಸ್ತಿಯವರಿಗಿದೆ. ಹಾಗೆಯೇ ಭಾರದ್ವಾಜನನ್ನು ಕಳೆದುಕೊಂಡು ಪ್ರೇಮದ ವಿರಹದಲ್ಲಿ ಸಿಲುಕಿ ದತ್ತನನ್ನು ಬಯಸುವ ಮಾಲಿನಿಯ ಬಗ್ಗೆ ಮಾಸ್ತಿಯವರಲ್ಲಿ ಅನುಕಂಪದ ಮನೋಭಾವನೆಯಿದೆ. ಇನ್ನು ಚಾಟ್ಲೈಟ್ ಪ್ರಭುವನ್ನು ಮದುವೆಯಾಗಿದ್ದರೂ ಸಹ ಫ್ರಾನ್ಸ್‌ನ ಮಹಾಲೇಖಕ ವಾಲ್ಟೇರ್‌ನ ಪ್ರೇಯಸಿಯಾಗಿಯೂ, ನಂತರ ಸೇಂಟ್ ಲ್ಯಾಂಬರ್ಟ್ ಎಂಬಾತನನ್ನು ಪ್ರೀತಿಸುತ್ತಾಳೆಯಾದರು ಮಾಸ್ತಿ ಅವಳ ಬಗ್ಗೆಯೂ ಔದಾರ್ಯವನ್ನು ತೋರಿಸುತ್ತಾರೆ. ಒಂದೊಂದು ಕತೆಯಲ್ಲೂ ಒಂದೊಂದು ರೀತಿಯ ಪ್ರೀತಿ, ಪ್ರೇಮ, ಪ್ರಣಯದ ಬಗೆಯನ್ನು ವಿಸ್ತರಿಸಿದ್ದಾರೆ. ಮೇಲೆ ತಿಳಿಸಿದ ಕತೆಗಳು ಮಾತ್ರ ಪ್ರೀತಿ ಪ್ರೇಮದ ನೆಲೆಯುಳ್ಳಂತಹವು ಎಂದು ಗೆರೆ ಎಳೆದು ಹೇಳುವುದು ಸರಿಯಲ್ಲ. ಈ ರೀತಿಯ ಪ್ರೀತಿ, ಪ್ರೇಮ, ಪ್ರಣಯದ ನೆಲೆಯುಳ್ಳ ಇನ್ನು ಅನೇಕ ಕತೆಗಳು ಇವೆಯಾದರೂ ಅಧ್ಯಯನದ ದೃಷ್ಟಿಯಿಂದ ನಾಲ್ಕಾರು ಕತೆಗಳನ್ನು ಮಾತ್ರ ಆಯ್ಕೆ ಮಾಡಿಕೊಂಡಿರುತ್ತೇನೆ.

## ಉಪಸಂಹಾರ

ಕನ್ನಡದಲ್ಲಿ ಸಣ್ಣಕತೆ ಅತ್ಯಂತ ಹುಲುಸಾಗಿ ಬೆಳೆದಿರುವ ಸಾಹಿತ್ಯ ಪ್ರಕಾರವಾಗಿದೆ. ಕಾಲಕಾಲಕ್ಕೆ ಬದಲಾಗುತ್ತ, ಬೆಳೆಯುತ್ತ, ಹೊಸ ಹೊಸ ಆಹ್ವಾನಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತ ತನ್ನ ಜೀವಂತಿಕೆಯನ್ನು ಕಾಪಾಡುಕೊಂಡು ಬಂದಿದೆ. ಆ ನಿಟ್ಟಿನಲ್ಲಿ ಮಾಸ್ತಿಯವರು ಸಣ್ಣ ಕತೆಗಳಿಗೆ ಜೀವವನ್ನು ತುಂಬಿ ಪೋಷಿಸಿದ್ದಾರೆ. ಕತೆಗಾಗಿ ಹತ್ತು ಹಲವು ಕಡೆಯಿಂದ ವಿಷಯವನ್ನು ಆಯ್ದುಕೊಳ್ಳುವ ಪ್ರವೃತ್ತಿಯನ್ನು ಮಾಸ್ತಿಯವರಲ್ಲಿ ವಿಶೇಷವಾಗಿ ಗುರುತಿಸಬಹುದು. ಭಾರತೀಯ ಸಮಾಜ ಹೊಸ ಬದಲಾವಣೆಗಳಿಗೆ ತೆರೆದುಕೊಳ್ಳಲಾರಂಭಿಸಿದ್ದ ಕಾಲದಲ್ಲಿ ಮಾಸ್ತಿ ಕತೆಗಳನ್ನು ಬರೆಯಲಾರಂಭಿಸಿದರು. ಕಾಲದಿಂದ ಕಾಲಕ್ಕೆ ವೈವಿಧ್ಯಮಯ ಕತೆಗಳನ್ನು ರಚಿಸುವಲ್ಲಿ ಯಶಸ್ವಿಯಾದರು. ಕಥಾ ನಿರೂಪಣೆಯ ವಿಧಾನದಲ್ಲಿ ಹೊಸ ಹೊಸ ತಂತ್ರಗಳನ್ನು ಬಳಕೆಗೆ ತಂದರು. ಕನ್ನಡದಲ್ಲಿ ಅದೂ ನವೋದಯ ಸಂದರ್ಭದಲ್ಲಿ ಕಥಾ ಸಾಹಿತ್ಯ ಅಷ್ಟೊಂದು ಸಮೃದ್ಧವಾಗಿ ಬೆಳೆಯಲು ಮಾಸ್ತಿಯವರು ನಿರೂಪಣಾ ವಿಧಾನದಲ್ಲಿ ತಂದ ಹೊಸ ಬದಲಾವಣೆಗಳೇ ಮುಖ್ಯ ಕಾರಣ ಎಂದು ಹೇಳಬಹುದು.

ಮಾಸ್ತಿಯವರ ಬಹುತೇಕ ಕತೆಗಳಲ್ಲಿ ಹೆಣ್ಣಿನ ಕಷ್ಟ, ಸಹಿಷ್ಣುತೆ, ಸ್ಥೈರಣೆ, ತಾಳ್ಮೆಗಳನ್ನು ನೋಡಬಹುದು. ಹೆಣ್ಣಿನ ಅಸಹಾಯಕತೆ, ಬವಣೆ, ದುಃಖ, ದುಮ್ಮಾನಗಳಿಗೆ ಮಾಸ್ತಿಯವರ ಹೃದಯ ಯಾವತ್ತೂ ಸ್ಪಂದಿಸಿದೆ. ವಿವಿಧ ಮನೋಧರ್ಮದ ನೂರಾರು ಹೆಣ್ಣು ಪಾತ್ರಗಳನ್ನು ಅವರು ತಮ್ಮ ಕತೆಗಳಲ್ಲಿ ವಿಶೇಷವಾಗಿ ಚಿತ್ರಿಸಿದ್ದಾರೆ. ಹೀಗಾಗಿ ಹೆಣ್ಣಿನ ಚಿತ್ರಣ ಮಾಸ್ತಿಯವರ ಕಥಾ ಸಾಹಿತ್ಯದಲ್ಲಿ ಯಾವತ್ತೂ ಏಕ ಮುಖವಾಗಿಲ್ಲ. ಎಲ್ಲಾ ಬಗೆಯ ಸರಳೀಕರಣ, ಆದರ್ಶೀಕರಣಗಳನ್ನು ಬದಿಗೊತ್ತಿ ಮಾಸ್ತಿ ಸ್ತ್ರೀಯನ್ನು ಜೀವಂತ ಪಾತ್ರಗಳಾಗಿ ಚಿತ್ರಿಸಿದ್ದಾರೆ.

ಕತೆಗಳಿಗಾಗಿ ಮಾಸ್ತಿಯವರು ಇತಿಹಾಸದಿಂದ, ಪುರಾಣದಿಂದ ಮಾತ್ರವಲ್ಲ ಸುತ್ತಮುತ್ತಲಿನ ಜಗತ್ತಿನ ಸಮಕಾಲೀನ ಜೀವನ ಸಂಗತಿಗಳನ್ನು ಆಯ್ದು ಕೊಂಡಿದ್ದಾರೆ. ಅವರ ಕತೆಗಳಲ್ಲಿ ನನ್ನಗನ್ನಿಸಿದಮಟ್ಟಿಗೆ ಮಹಿಳೆಗೆ ವಿಶೇಷವಾದ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ. ಮಾಸ್ತಿ ಕತೆಗಳಲ್ಲಿ ಎಲ್ಲಾ ಸ್ತ್ರೀ ಪಾತ್ರಗಳು ಒಂದೇ ತೆರನಾಗಿಲ್ಲ. ಲೈಂಗಿಕ ಕಟ್ಟುಪಾಡನ್ನು ಮೀರಿರುವ ವೆಂಕಟಿಗನ ಹೆಂಡತಿ, ಆಂಗ್ಲನೌಕಾಕ್ಯಾಪ್ಟನ್‌ನ ನೆಲ್, ಚಂದ್ರವದನೆ ಮುಂತಾದವರ ಬಗ್ಗೆ ಮಾಸ್ತಿಯವರು ಔದಾರ್ಯವನ್ನೇ ತೋರಿಸುತ್ತಾರೆ. ಈ ಸ್ತ್ರೀಯರು ಮಾಡಿದ್ದು ತಪ್ಪು ಎಂದು ಕಡಾಖಂಡಿತವಾಗಿ ಎಲ್ಲಿಯೂ ಹೇಳುವುದಿಲ್ಲ. ಆದುದರಿಂದಲೇ ನೀತಿಗೆಟ್ಟ ಹೆಂಡತಿಯನ್ನು ವೆಂಕಟಿಗ ಮತ್ತೆ ಕೂಡುವಂತವನಾಗುತ್ತಾನೆ. ಕ್ಯಾಪ್ಟನ್ 'ನೆಲ್'ಳನ್ನು ಕ್ಷಮಿಸುವಂತವನಾಗುತ್ತಾನೆ. ಚಂದ್ರವದನೆ ಅನೈತಿಕವಾಗಿ ಪಡೆಯುವ ಮಗುವಿಗೆ ನೆಲೆಯನ್ನು ಸಹ ಮಾಸ್ತಿ ತೋರಿಸುತ್ತಾರೆ. ಒಬ್ಬನನ್ನು ಮದುವೆಯಾಗಿ, ಮತ್ತಿಬ್ಬರನ್ನು ಪ್ರೇಮಿಸುವ

ಜಾಟ್‌ಲೈಟ್ ಪ್ರಭುವಿಯ ಬಗ್ಗೆ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತಾರೆ. ಗಿರಿಜವ್ವೆ, ಲಕುಮವ್ವೆಯರಂತವರಲ್ಲಿ ತ್ಯಾಗದ ಮನೋಭಾವನೆಯನ್ನು ಹುಡುಕುತ್ತಾರೆ.

'ಚೆನ್ನಮ್ಮ' ಎನ್ನುವ ಕತೆಯಲ್ಲಿ ಮಾತ್ರ ಹೆಣ್ಣು ಸಹ ಪ್ರತಿಭಟನೆಯನ್ನು ತೋರಿ ಗಂಡಸಿನ ಸಹಾಯವಿಲ್ಲದೆ ಬದುಕಬಹುದು ಎನ್ನುವ ಹೋರಾಟದ ಧ್ವನಿಯನ್ನು ಗುರುತಿಸಬಹುದು. ಆ ಒಂದು ಕತೆಯನ್ನು ಬಿಟ್ಟರೆ ನನಗನ್ನಿಸಿದ ಮಟ್ಟಿಗೆ ಬೇರ್ಯಾವ ಕತೆಯಲ್ಲೂ ಹೆಣ್ಣಿನ ಪ್ರತಿಭಟನೆಯ ಹಾದಿಯನ್ನು ಗುರುತಿಸಲಾಗುವುದಿಲ್ಲ. 'ಸ್ತ್ರೀ'ಯಾದವಳು ಪ್ರತಿಭಟನೆಯ ಮೂಲಕ ಬದುಕಬಹುದಾದ ಎಷ್ಟೋ ಕತೆಗಳನ್ನು ಮಸ್ತಿಯವರು ಸಾವಿನ ಮೂಲಕ ತೇಲಿಸಿರುವುದುಂಟು. ಉದಾಹರಣೆಗೆ 'ಮುನೀಶ್ವರನ ಮರ' 'ಚಿಕ್ಕವ್ವ', 'ಮೇಲೂರಿನ ಲಕ್ಷ್ಮಮ್ಮ', ಮುಂತಾದ ಕತೆಗಳನ್ನು ಗಮನಿಸಬಹುದು. ಮಾಸ್ತಿಯವರು ಸಂಪ್ರದಾಯಸ್ತರಾದ್ದರಿಂದ ಜಾತಿ ಶ್ರೇಣಿಕರಣದಲ್ಲಿ ನಂಬಿಕೆಯನ್ನಿಟ್ಟಿದ್ದರು ಎಂಬುದಕ್ಕೆ 'ವೆಂಕಟಶಾಮಿಯ ಪ್ರಣಯ' ಎನ್ನುವ ಕತೆ ಪುಷ್ಟಿಯನ್ನು ನೀಡುತ್ತದೆ. ನಾಯಿಂದನ ಮಗ ವೆಂಕಟಶಾಮಿ ದೊಂಬರ ಹುಡುಗಿಯನ್ನು ಪ್ರೇಮಿಸಿದ್ದೆ ಅವನ ಅನಾರೋಗ್ಯಕ್ಕೆ ಮೂಲ ಕಾರಣ ಎನ್ನುವ ರೀತಿಯಲ್ಲಿ ಚಿತ್ರಿಸಿದ್ದಾರೆ. ವೆಂಕಟಶಾಮಿಯ ಪ್ರಣಯ' ಕತೆಯಲ್ಲಿ ಅವನ ಪ್ರೇಮವನ್ನು ಜಯಸುವಂತೆ ಮಾಡಿ ಆ ಕತೆಯನ್ನು ಸುಖಾಂತವಾಗಿ ಮುಗಿಸಬಹುದಾಗಿತ್ತು ಎಂದೆನಿಸುತ್ತದೆ. ಆದರೆ ಮಾಸ್ತಿ ವೆಂಕಟಶಾಮಿಯ ದುರಂತ ಸಾವಿನೊಂದಿಗೆ ಕತೆಯನ್ನು ಮುಗಿಸಿರುವುದು ಅವರ ಸಂಪ್ರದಾಯದ ಮಡಿವಂತಿಕೆಯನ್ನು ತೋರಿಸುತ್ತದೆ. ಹಾಗೆಂದ ಮಾತ್ರಕ್ಕೆ ಮಾಸ್ತಿಯವರನ್ನು ಜಾತಿವಾದಿಗಳೆಂದು ಗುರುತಿಸಲಾಗುವುದಿಲ್ಲ. ಏಕೆಂದರೆ ಅವರು ಬರವಣಿಗೆ ಮಾಡಲಾರಂಭಿಸಿದ ಕಾಲಘಟ್ಟದ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಬೇಕಾಗುತ್ತದೆ.

ಗಂಡನ ಕ್ರೂರತನಕ್ಕೋ, ದುಷ್ಟತನಕ್ಕೋ ಇಲ್ಲವೆ ಕಾಮದ ದೃಷ್ಟಿಗೋ ಒಳಗಾಗಿ ಯಾತನೆ ಅನುಭವಿಸುವ 'ಚಿಕ್ಕವ್ವ', 'ಚೆನ್ನಮ್ಮ', 'ಮುನೀಶ್ವರ ಮರ'ದ ರಾಜಮ್ಮ, ದುರದೃಷ್ಟದ ಹೆಣ್ಣು, ಕತೆಯ ಮುಗ್ಧ ಹುಡುಗಿ ಮುಂತಾದವರ ಬಗ್ಗೆ ಮಾಸ್ತಿಯವರು ತೀವ್ರ ಕನಿಕರವನ್ನು ಸೂಚಿಸುತ್ತಾರೆ. ಇಂತಹ ಕತೆಗಳಲ್ಲಿ ಬಹುತೇಕ ಕಡೆ ಸಾವಿನ ಮೂಲಕವೇ ಅವರಿಗೆ ಸಾರ್ಥಕತೆಯನ್ನು ಒದಗಿಸುವಂತೆ ಮಾಡಿಬಿಡುತ್ತಾರೆ. ಇನ್ನು ಕುಟುಂಬದ ಪರಿಪಾಲನೆಯಲ್ಲಿ ಹಾಗೂ ಪ್ರಭುತ್ವ ನಿರ್ವಹಣೆಯಲ್ಲಿ 'ಸ್ತ್ರೀ'ಯು ಪುರುಷನಷ್ಟೇ ಶಕ್ತಳು ಎಂಬುದನ್ನು 'ಮೊಸರಿನ ಮಂಗಮ್ಮ', 'ಬಾಳಿನ ಚೌಕಾಬಾರ', 'ನಿಜಗಲ್ಲಿನ ರಾಣಿ', 'ಸಾವಿಯಬ್ಬೆ' ಮುಂತಾದ ಕತೆಗಳ ಮೂಲಕ ಮಾಸ್ತಿಯವರು ಸಾಬೀತುಪಡಿಸಿದ್ದಾರೆ.

ಜಗತ್ತಿನಲ್ಲಿ ತಾಯಿಯ ಪಾತ್ರವೇನು? ಅವಳು ತನ್ನ ಮಗುವಿನ ಉದ್ಧಾರಕ್ಕಾಗಿ ಏನೆಲ್ಲಾ ತ್ಯಾಗಗಳಿಗೆ ಸಿದ್ಧಳಾಗುತ್ತಾಳೆ ಎನ್ನುವುದನ್ನು 'ಮೇಲೂರಿನ ಲಕ್ಷ್ಮಮ್ಮ', 'ಚಟ್ಟೇಕಾರ

ತಾಯಿ', 'ಒಬ್ಬ ತಾಯಿ, ಮಗ' 'ನಳನಿಯ ತಂದೆ' ಮುಂತಾದ ಕತೆಗಳಲ್ಲಿ ಕಾಣಬಹುದಾಗಿದೆ. ಮಾಸ್ತಿಯವರು ಕೆಲವು ಕಥೆಗಳ ಮುಖಾಂತರ ತಾಯ್ತನದ ಹೃದಯವನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಪ್ರಸ್ತುತದಲ್ಲಿ ನನ್ನ ಶೀರ್ಷಿಕೆ 'ಸ್ತ್ರೀ' ಪಾತ್ರಗಳ ಅನಾವರಣ ಎಂತಿದ್ದರೂ ಕಥೆಗಳಲ್ಲಿ ಪುರುಷರಿಗೆ ಸ್ಥಾನವಿಲ್ಲ ಎಂದಲ್ಲ. ಅವರೂ ಇದ್ದಾಗಲೇ ಕಥೆ ಯಶಸ್ವಿಯಾಗಲು ಸಾಧ್ಯ. ಮಾಸ್ತಿಯವರ ಎಲ್ಲಾ ಕಥೆಗಳನ್ನು ನಾನಿಲ್ಲಿ ಚರ್ಚಿಸಿಲು ಸಾಧ್ಯವಾಗಿಲ್ಲ. ಆದ ಕಾರಣ ಪಾತಿನಿಧಿಕವಾದ ಕೆಲವು ಕತೆಗಳನ್ನು ಮಾತ್ರ ಆಯ್ಕೆ ಮಾಡಿಕೊಂಡಿದ್ದೇನೆ. ಮಾಸ್ತಿಯವರ ಕತೆಗಳನ್ನು ಕುರಿತು ಈಗಾಗಲೇ ಅನೇಕರು ತಮ್ಮ ತಮ್ಮ ಅಭಿಪ್ರಾಯಗಳನ್ನು ಲೇಖನಗಳ ಮುಖಾಂತರ, ಕೃತಿಗಳ ಮುಖಾಂತರ ವ್ಯಕ್ತಪಡಿಸಿದ್ದಾರೆ. ಆ ರೀತಿಯಾಗಿ ಪ್ರಕಟಗೊಂಡಿರುವ ಅನೇಕ ಲೇಖನಗಳು ಹಾಗೂ ಕೃತಿಗಳನ್ನು ಆದಾರವಾಗಿಟ್ಟುಕೊಂಡು ಮಾಸ್ತಿಯವರ ಕತೆಗಳಲ್ಲಿ 'ಸ್ತ್ರೀ' ಪಾತ್ರಗಳ ವೈವಿಧ್ಯತೆಯನ್ನು ಹುಡುಕಲು ಪ್ರಯತ್ನಿಸಿದ್ದೇನೆ. ಆ ನಿಟ್ಟಿನಲ್ಲಿ ಸಂಪೂರ್ಣವಾಗಿ ಯಶಸ್ಸು ಕಾಣದಿದ್ದರೂ, ಮನಸ್ಸು ಸಮಾಧಾನ ಪಟ್ಟುಕೊಳ್ಳುವಷ್ಟಾದರೂ ಯಶಸ್ಸನ್ನು ಗಳಿಸಿದ್ದೇನೆ ಎಂಬ ನಂಬಿಕೆಯಿದೆ. ಮುಂದೆ ಮಾಸ್ತಿಯವರ ಕತೆಗಳನ್ನು ಅಭ್ಯಯಿಸುವವರಿಗೆ ನನ್ನ ಈ ಪ್ರಬಂಧ ಅಷ್ಟಿಷ್ಟು ಸಹಾಯಕವಾದರೆ ನನ್ನ ಯತ್ನ ಸಾರ್ಥಕವೆಂದು ತಿಳಿಯುತ್ತೇನೆ.

## ಆಕರ ಗ್ರಂಥಗಳು


| | | | |
|---|---|---|---|
| ಅಶೋಕ .ಟಿ.ಪಿ. | 1993 | : | ಪುಸ್ತಕ ಪ್ರೀತಿ<br>(ಎಂಬತ್ತೇಳು ಪುಸ್ತಕಗಳ ಅವಲೋಕನ)<br>ಅಕ್ಷರ ಪ್ರಕಾಶನ ಹೆಗ್ಗೋಡು (ಸಾಗರ)<br>ಕರ್ನಾಟಕ – 577417. |
| ಗೋವಿಂದರಾಜ ಗಿರಡ್ಡಿ | 1992 | : | ಸಾತತ್ಯ<br>ಸ್ನೇಹ ಪ್ರಕಾಶನ<br>ವಿಜಯನಗರ ಎರಡನೇ ಹಂತ<br>ಬೆಂಗಳೂರು – 560040. |
| ನಾಗರಾಜ್ .ಡಿ.ಆರ್. | 2003 | : | ಅಮೃತ ಮತ್ತು ಗರುಡ<br>ಅಕ್ಷರ ಪ್ರಕಾಶನ<br>ಹೆಗ್ಗೋಡು (ಸಾಗರ)<br>ಕರ್ನಾಟಕ – 577417 |
| ನಾರಾಯಣ .ಕೆ.ವಿ. | 1997 | : | ಬೇರು, ಕಾಂಡ, ಚಿಗುರು.<br>ವಿವೇಕ ಪ್ರಕಾಶನ 436, 14ನೇ ಮೈನ್<br>ರೋಡ್ ಲಕ್ಕಸಂದ್ರ ಎಕ್ಸ್‌ಟೆನಷನ್<br>ಬೆಂಗಳೂರು – 30 |
| ಮೂರ್ತಿರಾವ್ .ಎ.ಎನ್. | 1999 | : | ಶ್ರೀ ಮಾಸ್ತಿಯವರ ಕಥೆಗಳು<br>ಕಾವ್ಯಾಲಯ ಪಬ್ಲಿಕೇಷನ್ಸ್ ಜಯನಗರ,<br>ಮೈಸೂರು |
| ರಾಘವೇಂದ್ರರಾವ್ . ಎಚ್.ಎಸ್. | 2001 | : | ಶತಮಾನದ ಸಾಹಿತ್ಯ ವಿಮರ್ಶೆ,<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ<br>ಭವನ, ಜೆ.ಸಿ. ರೋಡ್, ಬೆಂಗಳೂರು. |
| ಲಕ್ಕಪ್ಪಗೌಡ ಎಚ್.ಜೆ. | 2003 | : | ಸಾಹಿತ್ಯ ಬಹುಮುಖಿ ಚಿಂತನೆ<br>ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು. |
| ವೆಂಕಟೇಶ ಅಯ್ಯಂಗಾರ್ ಮಾಸ್ತಿ | 1989 | : | ಸಣ್ಣಕತೆಗಳು (ಸಂಪುಟ ೧)<br>ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು. |
| ವೆಂಕಟೇಶ ಅಯ್ಯಂಗಾರ್ ಮಾಸ್ತಿ | 1989 | : | ಸಣ್ಣ ಕಥೆಗಳು (ಸಂಪುಟ ೨)<br>ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು. |
| ವೆಂಕಟೇಶ ಅಯ್ಯಂಗಾರ್ ಮಾಸ್ತಿ | 1990 | : | ಸಣ್ಣ ಕಥೆಗಳು (ಸಂಪುಟ ೩)<br>ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು. |
| ವೆಂಕಟೇಶ ಅಯ್ಯಂಗಾರ್ ಮಾಸ್ತಿ | 1989 | : | ಸಣ್ಣ ಕಥೆಗಳು (ಸಂಪುಟ ೪)<br>ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು. |
| ವೆಂಕಟೇಶ ಅಯ್ಯಂಗಾರ್ ಮಾಸ್ತಿ | 1990 | : | ಸಣ್ಣ ಕಥೆಗಳು (ಸಂಪುಟ ೫)<br>ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು. |

## ಪರಾಮರ್ಶನ ಗ್ರಂಥಗಳು


| | | | |
|---|---|---|---|
| ಭಟ್ಟ .ಜಿ.ಎಸ್. | 1993 | : | ಮಾಸ್ತಿ ಸಾಹಿತ್ಯ ಚಿಂತನ<br>ಚೇತನ ಬುಕ್ ಹಾಸ್<br>ನಾರಾಯಣಶಾಸ್ತ್ರಿ ರಸ್ತೆ,<br>ಮೈಸೂರು – 570024. |
| ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ | 1994 | : | ಸ್ತ್ರೀವಾದಿ ಸಾಹಿತ್ಯ<br>ವಿಮರ್ಶೆ ಕನ್ನಡ ಸಂಘ ಕ್ರೈಸ್ಟ್<br>ಕಾಲೇಜ್, ಬೆಂಗಳೂರು. |
| ಗೋವಿಂದರಾಜು ಗಿರಡ್ಡಿ | 1978 | : | ಸಣ್ಣಕತೆಯ ಹೊಸ ಒಲವುಗಳು<br>ಸಾಹಿತ್ಯ ಭಂಡಾರ, ಹುಬ್ಬಳ್ಳಿ |
| ಕರೀಗೌಡ ಬೀಚನಳ್ಳಿ | 19912 | : | ಕಥನ ಕಲೆಯ ನೆಲೆಗಳು,<br>ಕರ್ನಾಟಕ ಸಾಹಿತ್ಯ ಅಕಾಡೆಮಿ,<br>ಬೆಂಗಳೂರು. |
| ರಾಮರಾವ್ .ಆರ್.ಎಸ್. | 1994 | : | ಮಾಸ್ತಿ ವೆಂಕಟೇಶ ಅಯ್ಯಂಗಾರ್<br>ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ<br>ಬೆಂಗಳೂರು. |
| ಅನಂತಮೂರ್ತಿ .ಯು.ಆರ್. | 1992 | : | ಸಮಕ್ಷಮ<br>ಅಕ್ಷರ ಪ್ರಕಾಶನ ಹೆಗ್ಗೋಡು<br>(ಸಾಗರ)<br>ಕರ್ನಾಟಕ – 577417 |
| ಪ್ರೊ. ಎಲ್.ಎಸ್. ಶೇಷಗಿರಿರಾವ್ | 1990 | : | ಭಾರತೀಯ ಸಾಹಿತ್ಯ ಸಮೀಕ್ಷೆ<br>(ಸಂಪುಟ 2) ಕನ್ನಡ ಸಾಹಿತ್ಯ<br>ಅಕಾಡೆಮಿ, ಬೆಂಗಳೂರು. |
| ನಾಗಭೂಷಣ ಡಿ.ಎಸ್. | 1998 | : | ಗಮನ<br>ಸಂವಾದ ಪ್ರಕಾಶನ ಮಲ್ಲಾಡಹಳ್ಳಿ,<br>ಚಿತ್ರದುರ್ಗ |
| ಶಾಮ್ಮರಾಯ ತ.ಸು. | 1993 | : | ಕನ್ನಡ ಭಾರತಿ<br>ಕರ್ನಾಟಕ ಸಾಹಿತ್ಯ ಅಕಾಡೆಮಿ,<br>ನೃಪತುಂಗ ರಸ್ತೆ, ಬೆಂಗಳೂರು. |
| ನಾಗಭೂಷಣಸ್ವಾಮಿ ಓ.ಎಲ್. | 1998 | : | ವಿಮರ್ಶೆಯ ಪರಿಭಾಷೆ<br>ಅಂಕಿತ ಪುಸ್ತಕ 138, ಮೊದಲನೆಯ<br>ಮಹಡಿ, ಗಾಂಧಿ ಬಜಾರ್ ಸರ್ಕಲ್<br>ಬಸವನಗುಡಿ, ಬೆಂಗಳೂರು. |

| | | | |
|---|---|---|---|
| ಶಾಮರಾಯ ತ.ಸು. | 1993 | : | ಕನ್ನಡ ಸಾಹಿತ್ಯ ಚರಿತ್ರೆ,<br>ತಳುಕಿನ ವೆಂಕಟಣ್ಣಯ್ಯ<br>ಸ್ಮಾರಕ – ಗ್ರಂಥಮಾಲೆ.<br>ಗೋಕುಲಂ ಮೂರನೇ ಹಂತ,<br>ಮೈಸೂರು –2 |
| ಮನು ಚಕ್ರವರ್ತಿ ಎನ್. | 1993 | : | ಭಾರತೀಯ ಸ್ತ್ರೀವಾದ<br>ಅಕ್ಷರ ಪ್ರಕಾಶನ,<br>ಹೆಗ್ಗೋಡು ಸಾಗರ – 577417 |
| ಬಸವರಾಜ ಸಬರದ | 1994 | : | ಸಾಹಿತ್ಯ ಸಂಗತಿ<br>ಪಲ್ಲವಿ ಪ್ರಕಾಶನ,<br>ಗುಲಬರ್ಗಾ |
| ಕೀರ್ತಿನಾಥ ಕುರ್ತುಕೋಟಿ | 1991 | : | ಯುಗಧರ್ಮ ಹಾಗೂ<br>ಸಾಹಿತ್ಯದರ್ಶನ<br>ಮನೋಹರ ಗ್ರಂಥಮಾಲೆ,<br>ಧಾರವಾಡ |
| ಅಮೂರ ಜಿ.ಎಸ್. | 1995 | : | ಸಾತ್ವಿಕ ಪಥ<br>ಪ್ರಿಯದರ್ಶಿನಿ ಪ್ರಕಾಶನ<br>ಬೆಂಗಳೂರು – 40 |
| ಸುಮಿತ್ರಾಬಾಯಿ .ಬಿ.ಎಸ್. ಗಾಯತ್ರಿ ಎನ್. | 1995 | : | ಸ್ತ್ರೀವಾದಿ ಪ್ರವೇಶಿಕೆ<br>ಕರ್ನಾಟಕ ಲೇಖಕಿಯರ ಸಂಘ,<br>ಚಾಮರಾಜಪೇಟೆ, ಬೆಂಗಳೂರು. |
| ಸಿದ್ಧಲಿಂಗಯ್ಯ ಜಿ.ಎಸ್.<br>ಕೃಷ್ಣಯ್ಯ ಎಂ.ಎಸ್. | 1990 | : | ಸಾಲು ದೀಪಗಳು<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ನೃಪತುಂಗ ರಸ್ತೆ, ಬೆಂಗಳೂರು. |
| ಶೇಷಗಿರಿ ರಾವ್ .ಎಲ್.ಎಸ್. | 1993 | : | ಹೊಸಗನ್ನಡ ಸಾಹಿತ್ಯ<br>ಕನ್ನಡ ಸಾಹಿತ್ಯ ಪರಿಷತ್ತು ಪಂಪ<br>ಮಹಾಕವಿ ರಸ್ತೆ, ಚಾಮರಾಜಪೇಟೆ,<br>ಬೆಂಗಳೂರು. |

